

# ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ

(ಕ.ರ.ಶಿ.ಸಂಸ್ಥೆಯ ಸ್ನಾತಕೊತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ,
ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ


ಸಂಶೋಧಕರು

**ಶಕುಂತಲಾ ಮಾಶೆಟ್ಟಿ**

ಮಾರ್ಗದರ್ಶಕರು

**ಡಾ.ಶಿವಗಂಗಾ ರುಮ್ಮಾ**
ಕ.ರಾ.ಶಿ ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ








**ಕನ್ನಡ ವಿಶ್ವ ವಿದ್ಯಾಲಯ ಹಂಪಿ**
**ವಿದ್ಯಾರಣ್ಯ - ೫೮೩೨೭೬**
**ಸೆಪ್ಟಂಬರ್ ೨೦೦೮**



# ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ

(ಕ.ರ.ಶಿ.ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ,
ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)




ಸಂಶೋಧಕರು

*ಶಕುಂತಲಾ ಮಾಶೆಟ್ಟಿ*





ಮಾರ್ಗದರ್ಶಕರು

*ಡಾ. ಶಿವಗಂಗಾ ರುಮ್ಮಾ*
ಕ.ರಾ.ಶಿ ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.





ಕನ್ನಡ ವಿಶ್ವ ವಿದ್ಯಾಲಯ ಹಂಪಿ
ವಿದ್ಯಾರಣ್ಯ – ೫೮೩ ೨೭೬
ಸೆಪ್ಟೆಂಬರ್ ೨೦೦೮

# ಪ್ರಮಾಣ ಪತ್ರ

**"ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ"** ಎಂಬ ನಿಬಂಧವನ್ನು ಡಾ. ಶಿವಗಂಗಾ ರುಮ್ಮಾ ಅವರ ಮಾರ್ಗದಶನದಲ್ಲಿ ಸಿದ್ಧಪಡಿಸಿ, ಎಂ,ಫಿಲ್. ಪದವಿಗಾಗಿ ಕ.ರಾ.ಶಿ ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಬೀದರ

ದಿನಾಂಕ : ೧೫-೦೯-೨೦೦೮

**ಶಕುಂತಲಾ ಮಾಶೆಟ್ಟಿ,**

ಎಂ.ಫೀಲ್.ವಿದ್ಯಾರ್ಥಿ,

ಕ.ರಾ.ಶಿ ಸಂಸ್ಥೆಯ,

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ.

# ಮಾರ್ಗದರ್ಶಕರ ಪ್ರಮಾಣ ಪತ್ರ

**“ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ”** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಶಕುಂತಲಾ ಮಾಶೆಟ್ಟ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದರಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈವೊದಲ ಯಾವುದೇ ಪದವಿಗಾಗಿ ಸಲ್ಲಿಸಿರವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಸ್ಥಳ : ಬೀದರ

ದಿನಾಂಕ : ೧೫-೦೯-೨೦೦೮

**ಡಾ. ಶಿವಗಂಗಾ ರುಮ್ಮಾ**
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ.

# ಪರಿವಿಡಿ

# ಅಧ್ಯಾಯ-೧
# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಸಾಹಿತ್ಯ ಅನುಭವ ಹಾಗೂ ಅಭಿವ್ಯಕ್ತಿಯ ಮೂಲಕ ಹೊರಬಂದ ಅಪರೂಪದ ಪ್ರಕಾರವೆಂದರೆ ಜನಪದ ಸಾಹಿತ್ಯವಾಗಿದೆ. ಇದರಲ್ಲಿ ಸಂಪೂರ್ಣವಾದ ಜನಪದ ಮೌಖಿಕ ಪರಂಪರೆವುಳ್ಳದ್ದಾಗಿದೆ. ಇದನ್ನು ಗಮನಿಸಿಕೊಂಡು ಜಾನಪದವು ಹತ್ತು ಹಲವು ಮುಖಗಳಾದ ಶಾಸ್ತ್ರ ಮಾನವಶಾಸ್ತ್ರ ವೈಜ್ಞಾನಿಕ ಅಂತರ್ ಶಿಸ್ತುಗಳ ಮೂಲಕ ವೈಚಾರಿಕ ಅಧ್ಯಯನಗಳು ಆದಂತೆ ಇಂದು ತೀವ್ರ ಪ್ರತಿರೋಧವನ್ನುಂಟು ಮಾಡುವ ಕಲ್ಪನೆಯೂ ವಿಶಿಷ್ಟವಾಗಿದೆ. ಕನ್ನಡ ಸಾಹಿತ್ಯದಲ್ಲಿಯೇ ಅತ್ಯಂತ ಅದ್ಭುತವಾದ ಜನಪದ ಸಾಹಿತ್ಯ ಪ್ರಕಾರ ಕೂಡಿದ್ದು ಕಂಡುಬರುತ್ತದೆ. ಮಾನವೀಯ ನೆಲೆಗಳ ಮೂಲಕ ತನ್ನತನವನ್ನು ಬಿಟ್ಟುಕೊಡದೇ ಅಂತರಂಗದ ಸಕಲ ಜೀವಾತ್ಮರಿಗೆ ಲೇಸು ಬಯಸಿದ ಜನಪದರು ಅದರಲ್ಲೂ ಮಹಿಳೆಯ ಅಭಿವ್ಯಕ್ತಿ ಅನನ್ಯತೆಯಿಂದ ಕೂಡಿದೆ. ಆಕಾರಣದಿಂದ ಇಂದು ಬಹುಮುಖಿ ನೆಲೆಗಳಿಂದ ಅಧ್ಯಯನ ಮಾಡದಿರುವುದಕ್ಕೆ ಇದೇ ಕಾರಣವಾಗಿದೆ.

ಕಳೆದ ಶತಮಾನಗಳಿಂದಲೂ ಪಾಶ್ಚಾತ್ಯ ಭಾರತೀಯ ಹಾಗೂ ಕನ್ನಡದಲ್ಲಿ ಜಾನಪದ ಅಧ್ಯಯನವು ಕುತೂಹಲದಿಂದ ಕೂಡಿದೆ. ಅಷ್ಟೇ ತೀವ್ರಗತಿಯಲ್ಲಿ ಆಗುತ್ತಿರುವುದು ಸಮಾಧಾನ ತಂದಿದೆ. ಇತ್ತೀಚಿನ ದಶಕಗಳಿಂದ ತೀವ್ರ ಸ್ವರೂಪ ಪಡೆದು ಹಲವು ಆಯಾಮ ಹೊಂದಿ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕವಾದ ಅಧ್ಯಯನದ ಮೂಲಕ ಗಮನಸೆಳೆದಂತೆ ಮಹಿಳಾ ಪ್ರಮುಖ ಕಲ್ಪನೆಯನ್ನು ಇಟ್ಟುಕೊಂಡು ಅಧ್ಯಯನ ಮಾಡಲಾಗುತ್ತಿದೆ. ಇದರಿಂದ ಮರುಸ್ಥಾಪಿಸುವ ಎಲ್ಲಾ ಬಗೆಯ ಪ್ರಯತ್ನ ಜಾನಪದಕ್ಕೆ ಒಡ್ಡಿಕೊಳ್ಳಲಾಗಿದೆ. ಜನಪದ ಸಾಹಿತ್ಯದ ಹಲವು ವಿಧಾನಗಳು ಬಹು ಸಂಸ್ಕೃತಿಯನ್ನು ಪ್ರತಿಪಾದಿಸುತ್ತವೆ. ಜನಪದ ಸಾಹಿತ್ಯ ನಂಬಿಕೆ ಆಚರಣೆ ಸಂಪ್ರದಾಯಗಳು ಒಳಗೊಂಡಂತೆ ಜನಪದ ವೈದ್ಯ ಪದ್ಧತಿಗಳು ಜೀವನ ವಿಧಾನವನ್ನು ಸಮಗ್ರವಾಗಿ ರೂಪಿಸುತ್ತವೆ. ಅನೇಕ ಸತ್ಯ ಸಂಗತಿಗಳು ಕುರಿತು ಅಧ್ಯಯನ ಮಾಡಲು ಸಾಧ್ಯವಾಗುವುದಿಲ್ಲ. ಹೀಗಾಗಿ ಅವುಗಳನ್ನು ಒಂದೇ ನೆಲೆಯಲ್ಲಿ ಅಧ್ಯಯನ ಮಾಡುವುದನ್ನು ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆಯೆಂದು ಗುರುತಿಸಿಕೊಂಡು ಹೊಸ ದೃಷ್ಟಿಯಿಂದ ಗಮನಹರಿಸಲಾಗಿದೆ.

ಜನಪದ ಸರ್ವ ಸಾಮಾನ್ಯ ಸಂಗತಿಗಳನ್ನು ಒಳಗೊಂಡದ್ದು ಇಡೀ ಭೂಮಂಡಲ ಒಂದಾಗಿಸುತ್ತದೆ. ಜನನದಿಂದ ಮರಣದವರೆಗೂ ಜೀವನದ ಧರ್ಮವನ್ನು ಪ್ರತಿಪಾದಿಸುತ್ತದೆ. ಜೀವನ ಮೌಲ್ಯಗಳನ್ನು ಪ್ರತಿಪಾದಿಸುತ್ತದೆ. ಇಂತಹ ಜಗತ್ತಿಗೆ ಸರ್ವ ಶ್ರೇಷ್ಠ ಸಮಾನತೆ ಸಾರುವ ಅಂತರಂಗದ ನುಡಿ ಅನುಭವವಾಗಿ ಅಭಿವ್ಯಕ್ತಿಗೊಂಡ ಮೌಖಿಕ

ಸಂವರ್ದನೆ ಜನಪದವಾಗಿದೆ. ವಿಶಾಲ ಅರ್ಥವ್ಯಾಪ್ತಿ ಒಳಗೊಂಡಿದ ಕಾವ್ಯ ಧರ್ಮಗಳು ಇಲ್ಲಿ ನೆಲೆಗೊಂಡಿವೆ.

ಇಂತಹ ಜನಪದ ಸಾಹಿತ್ಯದಲ್ಲಿ ಗೀತೆ, ಕತೆ, ಗಾದೆ, ಒಗಟು, ಮಹಾಕಾವ್ಯಗಳಲ್ಲಿ ಕಾಣಸಿಗುವ ಮಹಿಳಾ ಸಂವೇದನೆಗಳು ಬಹುಮುಖಿಯಾಗಿವೆ. ಆದರೆ ಇಲ್ಲಿ ಪುರುಷ ಪ್ರಧಾನ ಸಂಸ್ಕೃತಿ ಮಹಿಳೆಗೆ ಏನೂ ಕೂಡ ದೊರೆಯದಂತೆ ಮಾಡಿದೆ. ಭಾರತೀಯ ಸಮಾಜದಲ್ಲಿ ಹೆಣ್ಣನ್ನು ವ್ಯಕ್ತಿ ಎಂದು ಪರಿಗಣಿಸಿದ ಒಂದು ಮಾತನ್ನು ಕೂಡ ನಾವು ಕಾಣುವುದಿಲ್ಲ. ಭಾರತೀಯ ಸಂಸ್ಕೃತಿ ಹಿಂದೂ ಸಂಸ್ಕೃತಿ ಎಂಬ ಧಾರ್ಮಿಕ ಅಂಧ ಶ್ರದ್ಧೆಯಲ್ಲಿ ತನ್ನತನವನ್ನು ಕಳೆದುಕೊಂಡಿದೆ. ಬಹುಮುಖ ನೆಲೆಗಳಲ್ಲಿ ಮನುಷ್ಯ ಮನುಷ್ಯನನ್ನು ನೋಡಿಕೊಳ್ಳಲಿಲ್ಲವೆಂದರೆ ಅವರಲ್ಲಿ ಕಾಣುವ ಶಕ್ತಿಯನ್ನು ಅರಿಯಬೇಕಾಗಿದೆ.

ಚರಿತ್ರೆಯಲ್ಲಿ ದಾಖಲಾದಂತೆ ಮಹಿಳೆಯನ್ನು ವಸ್ತು ಮುಖಿಯಾಗಿ ನೋಡೋದು ಯಾವ ಮಹಾತ್ಮರಿಗೂ ಸಾಧ್ಯವಾಗಿಲ್ಲ. ಪುರುಷ ಪ್ರಧಾನವಾದ ಜನಮುಖಿ ಸಂಸ್ಕೃತಿಯಲ್ಲಿ ಯಾರನ್ನೂ ಅರ್ಥೈಸಿಕೊಳ್ಳದೆ ಹೋದದ್ದರಿಂದ ನಾವು ನಮ್ಮತನವನ್ನು ಕಳೆದುಕೊಳ್ಳುತ್ತೇವೆ. ಸರಕು ಸಂಸ್ಕೃತಿಯಲ್ಲಿ ಮಹಿಳೆಯನ್ನು ಕೇವಲ ಗಂಡಸು ಬಳಸಿಕೊಳ್ಳುವ ವಿಧಾನದಲ್ಲಿ ನೋಡುತ್ತಾರೆ. ಸಾಮಾಜಿಕ ಜೀವನದ ರಚನೆಯಲ್ಲಿ ಅನ್ಯರ ಹಂಗಿನಲ್ಲಿಯೇ ಕಾಲ ಕಳೆಯುತ್ತಿರುವುದು. ಧರ್ಮ ಮಾತ್ರ ಹಿಂಸನಾದದಲ್ಲಿಯೇ ನಾತು ಪ್ರಭುತ್ವ ಮತ್ತು ಧರ್ಮ ಸತ್ಯಗಳು ಹೆಣ್ಣನ್ನು ಕೀಳಾಗಿ ಕಾಣಲಾಗಿದ್ದು ಭಾರತಿಯ ಸಂಸ್ಕೃತಿಯು ನಾಚಿಕೆ ಪಡುವಂತದ್ದಾಗಿದೆ. ಈ ನೆಲೆಯಿಂದ ಮಾತ್ರ ನಾವು ಅಧ್ಯಯನಕ್ಕೊಳಪಡಿಸುವುದು ಸೂಕ್ತವಾಗಿದೆ.

ಜನಪದ ಸಾಹಿತ್ಯದ ವಿಚಾರಧಾರೆಗಳು ಬಹುಮುಖ್ಯ ಚಿಂತನಾಧಾರೆಗಳಾಗಿ ಹೊರಹೊಮ್ಮಿವೆ. ಜನಪದ ಸಾಹಿತ್ಯವೆಂದಾಕ್ಷಣ ನಮಗೆ ಮಹಿಳೆ ತನ್ನ ಶೀಲ, ಪಾವಿತ್ರ್ಯತೆ ಕಾಪಾಡಿಕೊಂಡು ಅನ್ಯರ ಹಂಗುಗಳಲ್ಲಿ ಬಾಳುವುದಾಗಿದೆ. ಅನ್ಯರು ಎಂದಾಗ ಪುರುಷ ಪ್ರಧಾನದಲ್ಲಿ ಗಂಡಸು ತನ್ನ ಅಧೀನದಲ್ಲಿಯೇ ಮಹಿಳೆ ಇರಬೇಕೆಂದು ಪ್ರತಿಪಾದಿಸುತ್ತಾರೆ. ಮಹಿಳೆ ಕೇವಲ ಭೋಗದ ಹಾಗೂ ದುಡಿಯುವ ವರ್ಗವಾಗಿ ಕಾಣಿಸಿಕೊಂಡಿದೆ. ಅಲ್ಲಿ ಮಹಿಳೆ ಮೌನದಲ್ಲಿಯೇ ತನ್ನ ಎಲ್ಲಾ ನೋವು, ಶೋಷಣೆ, ಆಚರಣೆ, ನಲಿವುಗಳನ್ನು ಸಹ ಒಳಗೊಂಡು ಅವನ್ನು ನಿರ್ದಾಕ್ಷಿಣ್ಯವಾಗಿ ದೂರ ತಳ್ಳಿದ್ದು ಸತ್ಯದ ಸಂಗತಿಯಾಗಿದೆ. ಯಾವ ಮೂಲ ನೆಲೆಗಳಲ್ಲಿ ಕಾಣಸಿಗುವ ಪ್ರತಿಯೊಂದು ಅಂಶಗಳು ನಮ್ಮಲ್ಲಿ ಎಚ್ಚರದಿಂದ

ನೋಡಬೇಕಾಗಿದೆ. ಜನಪದ ಸಾಹಿತ್ಯವೆಂದರೆ ನಾವು ಗೌರವದಿಂದ ಪುರುಷ ತನ್ನ ಸಮಾಧಾನದಿಂದ ಗೌರವಿಸುತ್ತ ಬರಬೇಕಾಗಿದೆ. ನಾವು ನೀವೆಲ್ಲರು ಸಹ ಎಷ್ಟೇ ಶೋಷಣೆ ಅಪಮಾನ ಅವಮಾನಗಳು ದೊರಕಿದ್ದರು ಅದೇ ಪುಣ್ಯವೆಂದು ಭಾವಿಸಲಾಗಿದೆ. ಪುರಾಣ, ಕಾವ್ಯ ಪುರುಷರ ಬೆನ್ನು ಹಿಂದೆ ಹೋದರು ಸಹ ಅಲ್ಲಿಂದ ಇಲ್ಲಿತನಕ ಹೆಣ್ಣನ್ನು ನಾವು ಸಾಮಾಜಿಕ ನೆಲೆಗಳಲ್ಲಿ ಸಂಪೂರ್ಣವಾಗಿ ಹಿಡಿತ ಸಾಧಿಸಲಾರದೇ ಹೋಗಿದ್ದೇವೆ. ಹೆಣ್ಣು ಕೀಳಾಗಿ ಕಾಣಲಾಗಿದೆ. ಇಂತಹ ದುಃಸ್ಥಿತಿಯಲ್ಲೂ ಸಹಿತ ಮಹಿಳಾ ವರ್ಗವನ್ನು ಕುರಿತು ಜನಪದರು ನೋಡಿದ್ದಾರೆ. ಜನಪದ ಸಾಹಿತ್ಯ ಮೌಖಿಕ ಪರಂಪರೆಯಲ್ಲಿ ತನ್ನ ತಾನು ಕಳೆದುಕೊಂಡು ಹೊಸ ಅನ್ವೇಷಣೆಗೆ ಮುಖ ಮಾಡಿದೆ. ಇಲ್ಲಿ ಜಗತ್ತಿನ ಬಹುಮುಖಿ ಸಂಸ್ಕೃತಿ ಚಿಂತನೆಗಳು ನಮ್ಮಲ್ಲಿ ಕಾಣಸಿಗುತ್ತವೆ. ಅವುಗಳನ್ನೆಲ್ಲ ಕೇಂದ್ರಿಕರಿಸಿಕೊಂಡು ಹೊರಬರುತ್ತಿರುವುದು ಸಮಾಧಾನದ ಸಂಗತಿಯಾಗಿದೆ. ನಮ್ಮ ಜನಪದರು ಹೆಣ್ಣನ್ನು ಸಹ ಯಾರಿಗೂ ಹೇಳದೆ ಕೇಳದೆ ತಾವೇ ನಿರ್ಧರಿಸಿಕೊಂಡು ಬಂದ ಒಂದು ಪುರುಷ ವರ್ಗವೇ ಇದೆ. ಹರಿಶ್ಚಂದ್ರ ಹೆಂಡತಿಯನ್ನು ಮಾರಿದ, ದ್ರೌಪದಿಯನ್ನು ಪಾಂಡವರು ಜೂಜಿಗೆ ಪಣಕ್ಕೊಡ್ಡಿದರು, ಸೀತೆಯನ್ನು ಅಗ್ನಿಪ್ರವೇಶ ಮಾಡಿಸಿದ ರಾಮ. ಅಹಲ್ಯ ಶಬರಿಯಂತಹವರು ಸಹ ಮಹಿಳಾ ಪ್ರಧಾನವಾದವರು ಕೊನೆ ಹಂತದಲ್ಲಿ ಅವರನ್ನು ಶೋಷಣೆಗೆ ಗುರಿ ಮಾಡಲಾಯಿತು. ಇಂತಹ ಸಮಾಜದಲ್ಲಿ ಮಹಿಳೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳಬೇಕಾಯಿತು. ಇದನ್ನೆಲ್ಲಾ ಅರಿತರೆ ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ ಎನ್ನುವ ಅಂಶವನ್ನು ಮುಖ್ಯವಾಗಿ ಹಿಡಿದುಕೊಂಡು ಹೋದರೆ ನಮಗೆ ಸಿಗುವುದು ಬಹು ಅಪರೂಪ ಆದರೂ ಅಂತಹ ಒಂದು ಪ್ರಯೋಗ ಮಾಡಬೇಕಾದ ಅವಶ್ಯಕತೆ ಇದೆ. ಈ ಹಿನ್ನಲೆಯನ್ನು ಗಮನಿಸಿಕೊಂಡು ಪ್ರತಿಭಟನೆ ಎಂಬ ವಿಚಾರಗಳೇ ಇಲ್ಲಿ ಸಿಕ್ಕುವುದು ಕಡಿಮೆಯೆಂದೆ ಎನಿಸುತ್ತದೆ. ಜನಪದ ಮಾತೃ ಪ್ರಧಾನವಾದ ಚಿಂತನೆಗೆ ಮಮಕಾರ ಪ್ರೀತಿ, ವಾತ್ಸಲ್ಯ ಅಂತಃಕರಣಗಳನ್ನು ಮಾತ್ರ ಪ್ರತಿಪಾದಿಸುತ್ತವೆ. ಪಿತೃ ಪ್ರಧಾನ ಪರಿಕಲ್ಪನೆಗಳು ಮೌಲ್ಯಗಳನ್ನು ಇಲ್ಲಿ ದಾಖಲಿಸಲಾಗುತ್ತದೆ. ಅದು ಅಲ್ಲದೇ.

ಕಾಲಲಿಪ್ಪ ಮೆಟ್ಟು ಕಾಲಲಿದ್ದರೆ ಚಂದೊ
ತಲಿಮ್ಯಾಲದನು ಹೊರಬ್ಯಾಡ । ತಮ್ಮಯ್ಯಾ
ಸಲಿಗಿ ಮಡದಿಗೆ ಕೊಡಬ್ಯಾಡ

ಇಲ್ಲಿರುವ ತ್ರಿಪದಿಯನ್ನು ಗಮನಿಸಿದರೆ ಯಾರು ಮುಖ್ಯ ಯಾರು ಅಮುಖ್ಯವೆಂದು ಹೇಳುವುದಕ್ಕಿಂತ ಮಹಿಳೆಯನ್ನು ಎಲ್ಲಿಗೆ ಹೋಲಿಸಲಾಗಿದೆ. ಇಂತಹ ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ ಹುಡುಕುವುದು ಕಷ್ಟದ ಸಂಗತಿಯಾಗಿದೆ. ಕತ್ತಲಲ್ಲಿ

ದೀಪ ಹಚ್ಚಿ ಹುಡುಕಬೇಕಾದ ಅನಿವಾರ್ಯತೆ ಇದೆ. ಆದರೂ ಇಲ್ಲಿ ವ್ಯಕ್ತವಾಗುವ ಅವು ಕಾವ್ಯವೇ ಬರಿಕತೆ. ಒಗಟು, ಮಹಾಕಾವ್ಯಗಳೇ ಇರಲಿ ಅಲ್ಲಲ್ಲಿ ಬಳಕೆಯಾದುದನ್ನು ಸಮಗ್ರವಾಗಿ ತೋರಿಸುವುದು ಸೂಕ್ತವಾಗಿದೆ. ಈ ನೆಲೆಯಿಂದ ಇಲ್ಲಿ ಕಿರು ಪ್ರಬಂಧ ರಚನೆಗೊಂಡಿದೆ. ಆದರೂ ಸಮಗ್ರ ಜನಪದ ಸಾಹಿತ್ಯದಲ್ಲಿ ಬಂದ ಮಹಿಳಾ ಪ್ರತಿಭಟನೆ ಇಲ್ಲಿ ದಾಖಲಿಸಲಾಗಿದೆ. ಜನಪದ ಸಾಹಿತ್ಯ ಸಾಂಸ್ಕೃತಿಕ ಖಣಿಯಾಗಿದೆ. ಇಲ್ಲಿರುವ ಕಾವ್ಯಗೀತೆ, ಕಥೆ, ಗಾದೆ, ಒಗಟು, ಒಡಪು, ಗದ್ಯ-ಪದ್ಯ ಮಿಶ್ರ ಸಾಹಿತ್ಯವು ಸಹಿತ ಇಲ್ಲಿ ಅಧ್ಯಯನದ ನೆಲೆಗಳು ಪ್ರಮುಖವಾಗಿವೆ. ಅವುಗಳ ಸಾಹಿತ್ಯದ ಪುಟ ತಿರುವಿದಾಗ ಅಲ್ಲಿ ಕಾಣುವ ಉಪಲಬ್ಧವಾದ ಅಂಶಗಳು ಅದರಲ್ಲೂ ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ ಎಂಬ ಅಂಶ ಕುತುಹಲದಿಂದ ಕೂಡಿದೆ.

ನಮ್ಮ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ, ಕ್ಷೇತ್ರವಾದ ಪ್ರಗತಿಯಲ್ಲಿ ಮಹಿಳೆ ಕುಂಠಿತಗೊಳ್ಳುತ್ತಿದ್ದಾಳೆ. ಇದನ್ನು ಅವರು ಲಕ್ಷಿಸಿಕೊಂಡು ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ ನೆಲೆಗಳನ್ನು ಗಮನಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ:**

ಜನಪದ ಸಾಹಿತ್ಯ ವಿಶಾಲವಾಗಿದ್ದು, ಏನೆಲ್ಲಾ ಅಡಗಿಸಿಕೊಂಡು ಸಾಹಿತ್ಯದಲ್ಲಿ ಕುಳಿತಿದೆ. ಅಲ್ಲದೆ ಜನಪದ ಮಹಿಳೆ ಅನಕ್ಷರಸ್ಥರಾದರು. ತಮ್ಮ ಅನುಭವ ಹಾಗೂ ಮಾಡುವ ಕೆಲಸ ಕಾರ್ಯಗಳ ಮೂಲಕ ಮಹಿಳೆಯನ್ನು ಅಧ್ಯಯನ ಮಾಡಲಾಗುತ್ತದೆ. ಜನಪದವು ಸಮಗ್ರವಾದ ಸಾಹಿತ್ಯದ ಹಲವು ಪ್ರಕಾರಗಳು ಇದರಲ್ಲಿ ಸೇರಿಕೊಂಡಿವೆ. ಅವು ಕಾವ್ಯ, ಕಥೆ, ಒಗಟು, ಒಡಪು, ಗಾದೆ, ಗೀತೆಗಳು ಹಾಗೂ ಮಹಾಕಾವ್ಯಗಳು ಸಹಿತ ಸೇರಿಕೊಂಡಿವೆ. ಅವುಗಳನ್ನು ವರ್ಗೀಕರಿಸಿಕೊಂಡು ಜನಪದ ಸಾಹಿತ್ಯದ ವಿವೇಚನೆ ಮಾಡಲಾಗಿದೆ. ಸಮಗ್ರವಾದ ಜನಪದ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಿ ಒಂದು ವರ್ಷದ ಅವಧಿಯಲ್ಲಿ ನಾವು ಜನಪದ ಸಮಗ್ರ ಸಂಗ್ರಹವೇ ಮಾಡಲು ಅಸಾಧ್ಯದ ಮಾತು ಅಂತರ್ ಶಿಸ್ತು ಹಾಗೂ ಬಹುಮುಖ ನೆಲೆಗಳಲ್ಲಿ ಸಹಿತ ಅಧ್ಯಯನವಾಗುತ್ತಿರುವುದು. ಮಹಿಳಾ ಕೇಂದ್ರಿತವಾದ ಹಿನ್ನಲೆಯಲ್ಲಿ ಅಧ್ಯಯನ ಮಾಡುವುದಾಗಿದೆ. ಸ್ತ್ರೀ ವಾದ ಚಿಂತನೆಯ ಹಿನ್ನಲೆ ನೋಡುವುದು ಅಲ್ಲಿ ಪ್ರತಿರೋಧವನ್ನು ಒಡ್ಡುವ ಸಮಾಜದಲ್ಲಿ ಬಹುಮುಖ ಚಿಂತನೆಗಳನ್ನುಂಟು ಮಾಡುತ್ತದೆ. ಹೀಗೆ ಜನಪದ ಸಾಹಿತ್ಯ ತನ್ನ ಅಸ್ತಿತ್ವವನ್ನು ಹುಡುಕಿಕೊಂಡು ಬರುತ್ತಿದೆ. ನಮ್ಮ ಅಧ್ಯಯನದ ವ್ಯಾಪ್ತಿ ಸೀಮಿತವಾದದ್ದು ಹಾಗೇ ಕಾವ್ಯ, ಕತೆ, ಮಹಾಕಾವ್ಯ, ಗಾದೆ, ಒಗಟುಗಳಲ್ಲಿ ಕಾಣಸಿಗುವ ಮಹಿಳಾ ಪ್ರತಿಭಟನೆಯು ಮಾತ್ರ ತೆಗೆದುಕೊಂಡು ಇಲ್ಲಿ ದಾಖಲಿಸಲಾಗಿದೆ. ಅಸ್ತಿತ್ವವಾದ ಜನಪದ

ಸಾಹಿತ್ಯದಲ್ಲಿ ನೋವಿನ ನೆಲೆಗಳು ಪ್ರತಿರೋಧ ಹಾಗೂ ಮೌನ ಪ್ರತಿಭಟನೆಗಳನ್ನು ಸಂಪೂರ್ಣವಾಗಿ ಅಧ್ಯಯನದಲ್ಲಿ ಒಳಪಡಿಸಿದಾಗ ಅಲ್ಲಿ ಸಿಗುವ ಸಾಹಿತ್ಯದಲ್ಲಿಯೇ ಈ ಚೌಕಟ್ಟಿನ ಹಾಗೂ ಮಿತಿಗಳ ನಡುವೆ ಅಧ್ಯಯನ ವ್ಯಾಪ್ತಿ ಅಳವಡಿಸಿಕೊಳ್ಳಲಾಗಿದೆ.

**ಸಂಶೋಧನಾ ವಿಧಾನ:**

ಈ ಕಿರು ಪ್ರಬಂಧದಲ್ಲಿ ನನ್ನ ಅಧ್ಯಯನದ ವಿಚಾರಗಳು ಹಲವು ವಿದ್ವಾಂಸರಿಗೆ ಲೇಖಕರಿಗೆ ಕುತೂಹಲ, ಆಶ್ಚರ್ಯ ಹುಟ್ಟಿಸಿದವು. ಜನಪದ ಸಾಹಿತ್ಯದ ಮಿತಿ ಒಳಗಡೆ ಅಧ್ಯಯನ ಮಾಡುವುದು ಕಷ್ಟಸಾಧ್ಯವೆಂದು ವ್ಯಕ್ತಪಡಿಸಿದರು. ಆದರೂ ಅಲ್ಲಲ್ಲಿ ಕಂಡು ಬಂದ ಸಾಹಿತ್ಯದ ಸಮುದ್ರದಲ್ಲಿ ಬೊಗಸೆಯ ನೀರನ್ನು ತೆಗೆದುಕೊಂಡಂತೆ ಜನಪದ ಸಾಹಿತ್ಯ ಹಲವು ಪ್ರಕಾರಗಳಲ್ಲಿ ಮಹಿಳಾ ಪ್ರತಿಭಟನೆಯ ಮಾತ್ರ ಹೆಕ್ಕಿ ತೆಗೆಯಲಾಗಿದೆ. ಅನೇಕ ಸಂಗ್ರಹ ಸಂಪಾದನೆಗಲಲ್ಲಿ ಈಗಾಗಲೆ ಬಂದ ಇಲ್ಲಾ ಮಾಹಿತಿಗಳನ್ನು ಬಳಸಿಕೊಂಡು ವಿಮರ್ಶಾತ್ಮಕ ಹಾಗೂ ಅಂತರ್‌ಶಿಸ್ತಿನ ಸಂಶೋಧನಾ ವಿಧಾನವನ್ನು ಇಲ್ಲಿ ಅಳವಡಿಸಿಕೊಳ್ಳಲಾಗಿದೆ. ಅನೇಕ ವಿದ್ವಾಂಸರ ಹಾಗೂ ಸ್ತ್ರೀವಾದ ಚಿಂತಕರ ಹೇಳಿಕೆಗಳನ್ನು ಆಧಾರವಾಗಿಟ್ಟುಕೊಂಡು ಜನಪದ ಸಾಹಿತ್ಯ ಸಂಗ್ರಹ ಸಂಪಾದನೆಗಳು ಕೃತಿಗಳ ಆಧಾರದ ಮೇಲೆ ಸಮೀಕ್ಷೆ ವಿಶ್ಲೇಷಣೆ ವಿಮರ್ಶಾತ್ಮಕ ಸಂಶೋಧನಾ ಅಧ್ಯಯನವನ್ನು ಅಳವಡಿಸಿಕೊಳ್ಳಲಾಗಿದೆ. ಅಧ್ಯಯನವನ್ನು ಬೇಕಾಗುವ ಆಕರ ಪೂರಕ ಹಾಗೂ ವಿಶೇಷಣಾತ್ಮಕ ನೆಲೆಗಳಲ್ಲಿ ಕಾಣಸಿಗುತ್ತವೆ. ಸಂಶೋಧನೆ ತತ್ವ ವಿಧಾನಗಳ ಅಡಿಯಲ್ಲಿಯೇ ಈ ವಿಷಯ ಆಯ್ದುಕೊಳ್ಳಲಾಗಿದೆ.

**ಮಾಹಿತಿ ಹಾಗೂ ಆಕರ ಸಂಗ್ರಹಣೆಯ ನೆಲೆಗಳು:**

ಈ ಕಿರು ಪ್ರಬಂಧಕ್ಕೆ ಸಂಬಂಧಿಸಿದಂತೆ ಮಾಹಿತಿ ಹಾಗೂ ಆಕರ ಸಾಮಗ್ರಿ ಸಂಗ್ರಹಣೆ ಎರಡು ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಈಗಾಗಲೇ ಜನಪದ ಸಾಹಿತ್ಯವನ್ನು ಬಹುಮುಖಿ ನೆಲೆಗಳಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಈಗಾಗಲೇ ಸಂಗ್ರಹಿಸಿ ಸಂಪಾದಿಸಿದ ಜನಪದ ಸಾಹಿತ್ಯದ ಆಧಾರಮ ಮೇಲೆ ಮಾಹಿತಿ ಹಾಗೂ ಆಕರ ಸಂಗ್ರಹಣೆಯ ನೆಲೆಗಳನ್ನು ಗುರುತಿಸಿಕೊಳ್ಳಲಾಗಿದೆ. ಆ ಮೂಲಕವಾಗಿ ಪರಿಶೀಲಿಸಿ ಮುಖ್ಯವಾದ ಗೀತೆ-ಕತೆ, ಕಾವ್ಯ, ಒಗಟು, ಗಾದೆಗಳ ಆಧಾರದ ಮೇಲೆ ನಿರೂಪಿತಗೊಳಸಲಾಗಿದೆ. ಇಲ್ಲಿಯ ಸಂಗ್ರಹಣೆಗಳು ಮಾಹಿತಿ ಆಕರ ನೆಲೆಗಳಲ್ಲಿ ಮಹಿಳಾ ಪರವಾದ ಮಹಿಳಾ ಚಿಂತನೆಗಳು ಸಹ ಇಲ್ಲಿ ಅಧ್ಯಯನಕ್ಕೆ ಒಳಪಡಿಸಿಕೊಂಡು ಅಧ್ಯಯನಕ್ಕೆ ಬೇಕಾದ ಪೂರಕ ಸಾಮಗ್ರಿಯನ್ನು ಬಳಸಿಕೊಳ್ಳಲಾಗಿದೆ.

**ಅಧ್ಯಯನದ ಪ್ರಸ್ತುತತೆ ಪ್ರಯೋಜನೆ:**

ಪ್ರಾಚೀನ ಕಾಲದಿಂದಲೂ ಜನಪದ ಸಾಹಿತ್ಯ ತನ್ನದೆಯಾದ ನೆಲೆಗಳಲ್ಲಿ ಒಳಗೊಂಡಿದೆ. ಇಲ್ಲಿ ಜನಪದ ಅಭಿವ್ಯಕ್ತಿಯ ಮುಖ್ಯ ವಿಚಾರಧಾರೆಗಳನ್ನು ಇಲ್ಲಿ ದಾಖಲಿಸಲಾಗಿದೆ. ಜನಪದ ಮಹಿಳಾ ಸಾಹಿತ್ಯ ಸಂಸ್ಕೃತಿಗಳ ಚಿತ್ರಣವನ್ನು ಸಂಶೋಧನೆ ಮಾಡುವುದು ಸೂಕ್ತವೆಂದು ಭಾವಿಸಿ ಹೊಸ ನೆಲೆಗಳಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಮಹಿಳಾ ಪ್ರತಿಭಟನೆ ಜನಪದ ಸಾಹಿತ್ಯದಲ್ಲಿ ಸಾಂಸ್ಕೃತಿಕ, ಸಾಹಿತ್ಯಿಕ ಹಾಗೂ ಮಹಿಳಾ ಸಂವೇದನೆಗಳ ಹಿನ್ನಲೆಯಲ್ಲಿ ಅಧ್ಯಯನ ಪ್ರಯೋಜನವಾಗಲಿದೆ. ಇಂತಹ ಅಧ್ಯಯನ ಮುಂಬರುವ ಅಧ್ಯಯನಕಾರರಿಗೆ ಪ್ರಯೋಜನವಾಗಲಿದೆ.

**ಅಧ್ಯಯನದ ಕ್ರಮ:**

ಸಂಶೋಧನಾ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಕ್ಷೇತ್ರ ಕಾರ್ಯ ಕೈಗೊಳ್ಳುವ ಮೂಲಕ ಅನೇಕ ಗ್ರಂಥಾಲಯದಲ್ಲಿ ದೊರೆಯುವ ಜಾನಪದ ಸಾಹಿತ್ಯದ ಸಂಗ್ರಹಗಳು ಇಲ್ಲಿ ದಾಖಲಿಸಿಕೊಳ್ಳಲಾಗಿದೆ. ಅವುಗಳ ಸಂಗ್ರಹದಿಂದ ಅಧ್ಯಯನ ಕ್ರಮ ರೂಪಿಸಿಕೊಂಡು ವಿಶೇಷಣಾತ್ಮಕ ಹಾಗೂ ವಿಮರ್ಶಾತ್ಮಕ ನೆಲೆಯ ಮಹಿಳಾ ಅಧ್ಯಯನದ ಹಿನ್ನೆಲೆಯಲ್ಲಿ ಸಂಶೋಧನಾ ಅಧ್ಯಯನ ಕೈಗೊಳ್ಳಲಾಗಿದೆ.

ಅಧ್ಯಾಯ-೧ ರಲ್ಲಿ ಅಧ್ಯಯನದ ಉದ್ದೇಶ ಮಹತ್ವ ಮತ್ತು ವಿಧಾನಗಳು ಎಂಬಲ್ಲಿ ಸಂಪೂರ್ಣವಾಗಿ ಅಧ್ಯಯನದ ಸರ್ವ ವಿವೇಚನೆ ಮಾಡಲಾಗಿದೆ. ಅಧ್ಯಾಯ-೨ ರಲ್ಲಿ ಮಹಿಳಾ ಅಧ್ಯಯನದಲ್ಲಿ ಜಾನಪದ ಸಾಹಿತ್ಯ ಪ್ರವೇಶವನ್ನು ಕೂಡ ಸಮಗ್ರವಾಗಿ ಕೊಡಲಾಗಿದೆ. ಇಲ್ಲಿ ಎಲ್ಲಾ ಸಾಹಿತ್ಯದಲ್ಲಿ ಮಹಿಳಾ ಅಧ್ಯಯನವನ್ನು ರೂಪಿಸಲಾದ ಹಾಗೂ ಮಹಿಳಾ ಪ್ರತಿಭಟನೆ ವ್ಯಕ್ತವಾದ ಬಗೆಯನ್ನು ವಿವರಿಸಲಾಗಿದೆ. ಅಧ್ಯಾಯ-೩ ರಲ್ಲಿ ಜಾನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ ಎಂಬ ಅಧ್ಯಾಯವು ಸಮಗ್ರವಾದ ವಿವೇಚನೆಯಿಂದ ಕೂಡಿದೆ. ಈ ಕಿರು ಸಂಶೋಧನಾ ಪ್ರಬಂಧದಲ್ಲಿ ಇದು ಹೃದಯ ಭಾಗವಾಗಿದೆ. ಗೀತೆ, ಕಾವ್ಯ, ಮಹಾಕಾವ್ಯಗಳಲ್ಲಿ ಕತೆ-ಗಾದೆಗಳಲ್ಲಿ ಹಾಗೂ ಸಂಪ್ರದಾಯ ಆಚರಣೆ ಹಬ್ಬಗಳಲ್ಲಿ ಮಹಿಳಾ ಶಕ್ತಿಗಳು ಇಲ್ಲಿ ಹೇಗೆ ಅಭಿವ್ಯಕ್ತಿಗೊಂಡಿದೆ ಎಂಬುವುದರ ಸಂಪೂರ್ಣ ಸಮೀಕ್ಷೆ ಕೊಡಲಾಗಿದೆ. ಆ ಮೂಲಕ ವಿವರಣಾತ್ಮಕ, ಸಾಮಾಜಿಕ, ಧಾರ್ಮಿಕ, ಐತಿಹಾಸಿಕ, ಪುರಾಣ ಹಾಗೂ ಜನಪದ ಮತ್ತು ಶಿಷ್ಟ ಸಾಹಿತ್ಯಗಳ ನೆಲೆಗಳಲ್ಲಿ ಅಧ್ಯಯನ ಮಾಡಲಾಗಿದೆ. ಅಧ್ಯಾಯ-೪ ರಲ್ಲಿ ಜಾನಪದ ಸಾಹಿತ್ಯ ಮತ್ತು ಸ್ತ್ರೀವಾದದ ಪರಿಕಲ್ಪನೆ ಹೇಗೆ ಜನರಿಂದ ಸಾಹಿತ್ಯದಲ್ಲಿ ನಿರೂಪಿತಗೊಂಡಿರುವುದನ್ನು ಉಲ್ಲೇಖಿಸಲಾಗಿದೆ. ಅಧ್ಯಾಯ-೫ ರಲ್ಲಿ ಸಮಾರೋಪವಿದೆ. ಅವುಗಳ ಸಮಗ್ರ ವಿವರಣಾತ್ಮಕ ವಿಷಯಗಳ

ಅಧ್ಯಯನವು ಹಲವು ವಿಚಾರಧಾರೆಗಳಲ್ಲಿ ಅಭಿವ್ಯಕ್ತಗೊಂಡಿದೆ. ಮಹಿಳಾ ಪ್ರತಿಭಟನೆಯ ಸವಾಲು ಸಮಸ್ಯೆಗಳನ್ನು ವಿವರಿಸಲಾಗಿದೆ.

ಆಕರ ಗ್ರಂಥಗಳಲ್ಲಿ ಈ ಪ್ರಬಂಧ ಸಂಶೋಧನ ಅಧ್ಯಯನಕ್ಕೆ ಬೇಕಾಗುವ ಆಕರ ಪೋರಕ ಹಾಗೂ ಸಹಾಯಕ ಸಾಹಿತ್ಯವನ್ನು ಇಲ್ಲಿ ಉಳಿಸಿಕೊಳ್ಳಲಾಗಿದೆ. ಒಟ್ಟಾರೆ ಜಾನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ ಇದು ಒಂದು ಸಾಹಿತ್ಯದ ಹೊಸ ನೆಲೆಗಳನ್ನು ಕುರಿತು ಅಲೋಚಿಸುವ ಅಧ್ಯಯನದ ಮೂಲಕ ಇಲ್ಲಿಯ ಅಧ್ಯಯನ ಶ್ರಮ ಸಾರ್ಥಕವಾಗುತ್ತದೆ.

# ಅಧ್ಯಾಯ-೨
# ಸಾಹಿತ್ಯದಲ್ಲಿ ಮಹಿಳಾ ಚಿತ್ರಣ

ಮಾನವನ ಜೀವನು ಪ್ರಾಚೀನ ಕಾಲದಿಂದಲೂ ತನ್ನದೇ ಆದ ಪರಂಪರೆಯಿಂದ ಕೂಡಿದೆ. ಇಂತಹ ಮನವನ ಬದುಕಿಗೆ ಆದರ್ಶಪ್ರಾಯವಾಗುವ ಹಾಗೆ ಮಹಿಳೆಯರು ನೆಲೆ ನಿಂತಿದ್ದರಿಂದ ಅವರ ಕೊಡುಗೆ ಕೂಡ ಅಪಾರವಾದದು. ಮನುಷ್ಯ ನಾಗರಿಕತೆ ಸಂಸ್ಕೃತಿಯ ಸಂವರ್ಧನೆಗೆ ಮಹಿಳೆಯರ ಕೊಡುಗೆ ಅನನ್ಯತೆಯಿಂದ ಕೂಡಿದೆ. ಭಾರತೀಯ ಮೂಲ ಸಂಸ್ಕೃತಿಗಳಾದ ಈಜಿಪ್ತ, ಹರಪ್ಪಾ, ಮೆಸಪಟೊಮಿಯಾ ಹಾಗೂ ಮೆಹೆಂಜೋದಾರೊದಂತಹ ಹಲವಾರು ಸಂಸ್ಕೃತಿಗಳು ನಾಗರಿಕತೆಯ ಬೆಳವಣಿಗೆಗೆ ಕಾರನವಾಗಿವೆ. ಇಂತಹ ವಿಶೇಷ ಅಭಿವೃದ್ಧಿ ಹೊಂದುವಲ್ಲಿ ನಾಗರಿಕತೆ ಕಾರಣವಾಗಿದೆ. ಮನುಷ್ಯ ಅಭಿವೃದ್ಧಿ ಹೊಂದಲು ಮೂಲ ಆಕರವಾದದ್ದು, ಕೃಷಿ ಪ್ರಧಾನ ಸಂಸ್ಕೃತಿಯಾಗಿದೆ. ಈ ಕೃಷಿ ಪದ್ಧತಿಯ ಆವಿಷ್ಕಾರ ಹೊಸ ಬೆಳವಣಿಗೆ ಹೊಂದಿರುವ ಮಹಿಳೆಯರ ಮೂಲಕವೇ ಎಂಬುದಂತೂ ಸತ್ಯವಾದ ಸಂಗತಿಯಾಗಿದೆ. ಮಹಿಳೆ ನಮ್ಮ ಜಗತ್ತಿನ ಇತಿಹಾಸದಲ್ಲಿ ದುಡಿಮೆಗೆ ಹೆಸರಾಗಿದ್ದಾಳೆ. ಪ್ರತಿಯೊಂದು ಹಂತದಲ್ಲೂ ಕೆಲಸ ಕಾರ್ಯಗಳನ್ನು ಪ್ರಾಮಾಣಿಕವಾಗಿ ದುಡಿಯುತ್ತಾ ಬಂದವಳೆಂದರೆ ಮಹಿಳೆಯಾಗಿದ್ದಾಳೆ ಹೀಗಾಗಿ ಮಡಿಕೆ, ಕುಡಿಕೆಗಳ ತಯಾರಿಸುವಿಕೆಯಲ್ಲಿ ಮಹಿಳೆಯ ಪಾತ್ರ ಅಮೂಲ್ಯವಾಗಿದೆ. ಬಟ್ಟೆಗಳನ್ನು ತಯಾರಿಸುವ, ನೂಲು ತೆಗೆಯುವ, ನೇಯುವುದರ ಮೂಲಕ ಮಹಿಳೆ ತನ್ನ ಎಲ್ಲಾ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ಆ ಕಾರಣದಿಂದಾಗಿಯೇ ಮಹಿಳೆಯಿಂದಲೇ ಮಾನವನ ನಾಗರಿಕತೆ ಸಂಸ್ಕೃತಿಯ ದಾರಿಗಲು ಹೊರಬರಲು ಸಾಧ್ಯವಾಯಿತು. ಕೊಡುಗೆಗಳನ್ನೆ ಕೊಡಲು ಸಾಧ್ಯವಾಯಿತು. ಆದರೆ ಕಾಲಘಟ್ಟಗಳು ಬೇರೆಬೇರೆಯಾದಂತೆ ಅಂತಹ ಕೊಡುಗೆ ನಿಡಿದ ಮಹಿಳೆಯನ್ನೆ ಪುರುಷ ಪ್ರಧಾನ ಸಂಸ್ಕೃತಿಯೂ ಮರೆತುಹೋಯಿತು. ಮಾತೃ ಪ್ರಧಾನ ಸಂಸ್ಕೃತಿಯ ಆರಾಧಾತ್ಮಕರಾದ ಕನ್ನಡ ನಡು ಜನ ಸಮುದಾಯ ಬರುಬರುತ್ತಾ ಪಿತೃ ಪ್ರಧಾನ ಸಂಸ್ಕೃತಿ ಬೆಳವಣಿಗೆ ಹೊಂದಿದಾಗಲೇ ಪುರುಷ ಪ್ರಧಾನ ಸಂಸ್ಕೃತಿ ಕ್ರಮೇಣ ಭಾರತೀಯ ಸಂಸ್ಕೃತಿ ಮೇಲೆ ಹಿಡಿತ ಸಾಧಿಸಿತು. ಸಂಪೂರ್ಣವಾಗಿ ಕನ್ನಡನಾಡಿನ ಸಂಸ್ಕೃತಿಯ ಮೇಲೆ ತನ್ನ ಅಸ್ತಿತ್ವ ಉಳಿಸಿಕೊಂಡು ಬಂದಿತು.

ಜಗತ್ತಿನಲ್ಲಿಯೇ ಭೂಮಿಗೆ ಬಂದ ಅಸ್ತಿತ್ವವಿದೆ ಈ ಭೂಮಿಯ ಮೇಲೆ ಮನುಷ್ಯ ಆಹಾರ ಸಂಗ್ರಹಣೆಗಾಗಿ ಕಾಡು-ಕಾಡು ಅಲೆಯುತ್ತಿದ್ದ ಗುಡ್ಡ-ಬೆಟ್ಟ ಗವಿಗಳನ್ನೆ ಹುಡುಕುತ್ತಿದ್ದ ಅವರಲ್ಲಿ ಗಂಡು-ಹೆಣ್ಣು ಎಂಬ ಭೇದ ಭಾವವು ಇರಲಿಲ್ಲ.

ಮುಕ್ತವಾಗಿಯೇ ಅವರಲ್ಲಿ ಕೂಡಿ ಇರುತ್ತಿದ್ದರು. ಕಾಲಾನಂತರದಲ್ಲಿ ಅನೇಕ ಉಪಕರಣಗಳನ್ನು ಮಾಡಿಕೊಂಡು ಬೇಟೆಯಾಡುವ ಪ್ರವೃತ್ತಿ ಬೆಳೆಸಿಕೊಂಡರು. ಮೊದಲು ಕಲ್ಲುಗಳು ನಂತರ ಈಟಿ, ಭರ್ಜಿಯಂತರ ಅನೇಕ ಉಪಕರಣಗಳನ್ನು ಬಳಸಿಕೊಂಡು ಬೇಟೆಯಾಡುವ ಹೊತ್ತಿನಲ್ಲೂ ಸಹ ಭೇದವನ್ನು ಮಾಡಲಿಲ್ಲ.

ಪುರುಷನಾದವನು ಬೇಟೆಯಾಡಲು ಗುಡ್ಡ-ಗಾಡು ಅಲೆಯುತ್ತ ಹೋದರೆ ಮಹಿಳೆಯರು ಅಲ್ಲಿಯೆ ಗುಹೆ-ಪೊಟರೆಗಳಲ್ಲಿಯೇ ಉಳಿದುಕೊಂಡು ಶಿಶುಪಾಲನೆಯನ್ನು ಮಾಡುವ ಕರ್ತವ್ಯಕ್ಕೆ ಹೊಂದಿಕೊಂಡಳು. ತಮ್ಮಲ್ಲಿಯೇ ಉಳಿದುಕೊಂಡು ಜೀವನಕ್ರಮ ರೂಪಿಸಿಕೊಂಡರು. ಇವತ್ತಿನ ಅನೇಕ ಬುಟಕಟ್ಟು ಜನಾಂಗಗಳಾದವುಗಳು ಪ್ರಾಚೀನ ಕಾಲದಿಂದಲೂ ಇಂದಿಗೂ ಸಹ ಮಾತೃ ವಂಶೀಯವಾಗಿವೆ ಎಂಬುದನ್ನು ಯಾರು ಮರೆಯುವಂತಿಲ್ಲ.

ಮಾನವ ಜನಾಂಗ ಪ್ರತಿ ಕಡೆಗಳಲ್ಲಿ ವಾಸಿಸುವ ಸ್ಥಳದಲ್ಲಿ ಗಡ್ಡೆ, ಗೆಣಸು, ಬೀಜಗಳನ್ನು ತಿಂದು ಹೊರಹಾಕಿದ ಹಲವಾರು ಬೀಜಗಳು ಇಲ್ಲಿಯೇ ಭೂಮಿಮೇಲೆ ಮೊಳಕೆಯೊಡೆದು ಹೊರಬಮದ ಸಸಿಗಳ ಕಂಡು ಕುತುಹಲ ಉಂಟಾಯಿತು. ಆ ಮೂಲಕವೇ ತಮಗೆ ಬೇಕಾದ ಸಿಹಿ ಹಣ್ಣು ರುಚಿ ಎನಿಸಿದ ಗಡ್ಡೆ, ಹಣ್ಣು ಹಂಪಲ ಸಸ್ಯಗಳ ಬೀಜಗಳನ್ನು ಸಹ ಬೆಳವಣಿಗೆ ಮಾಡಲು ಅನುಕೂಲವಾಯಿತು.

ಇಂತಹ ವಿಧಾನವನ್ನು ಕೈಕೊಂಡಿದ್ದು, ಮುಂದೆ ಕೃಷಿಯು ಪರಂಪರೆಯಾಯಿತು. ಇಂತಹ ಕೃಷಿ ವಿಧಾನವನ್ನು ತಿಳಿದುಕೊಳ್ಳಲು ಮಹಿಳೆಯರೆ ಮೊದಲು ಪ್ರಯತ್ನಿಸಿ ಯಶಸ್ವಿಯಾದರು. ಕೃಷಿ ಹಾಗೂ ವ್ಯವಸಾಯ ಪದ್ಧತಿಗಳನ್ನು ಅವಿಸ್ಕಾರಕ್ಕೆ ಒಳಪಡಿಸಿದ್ದು ಮಹಿಳೆಯರು ಎಂಬುವುದರಲ್ಲಿ ಎರಡು ಮಾತಿಲ್ಲ. ಮುಂದೆ ಪಶುಪಾಲನೆ ಕೃಷಿ ಪ್ರಧಾನ ಸಂಸ್ಕೃತಿಗೆ ಬೇಕಾದ ಉಪಕರಣಗಳನ್ನು ಸಲಕರಣೆಗಳನ್ನು ಕಂಡುಕೊಳ್ಳಲು ಪುರುಷರು ಪ್ರಯತ್ನಿಸಿ ಅವುಗಳನ್ನು ತಯಾರಿಸಿಕೊಡಲು ಮುಂದೆ ಬಂದರು. ತದನಂತರದಲ್ಲಿ ಮಹಿಳೆಯರು ಸಂಪೂರ್ಣವಾಗಿ ಮನೆ ಹಾಗೂ ಮಕ್ಕಳ ಪಾಲನೆಗೆ ತೊಡಗಿದರಿಂದ ಅಲ್ಲಿಯೇ ಅಪಾರ ಕೆಲಸ ಕಾರ್ಯಗಳನ್ನು ಮೀಸಲಾದವು.

ಪುರುಷ ಯಾವಾಗ ಕೃಷಿ ಸಾಧನಗಳನ್ನು ತನ್ನ ಕೈಗೆತ್ತಿಕೊಂಡರೋ ಅಂದೆ ಕೃಷಿ ಪ್ರಧಾನ ಸಂಸ್ಕೃತಿ ಪುರುಷನಿಗೆ ಮೀಸಲಾಯಿತು. ಈ ಕಾರಣದಿಂದಾಗಿಯೇ ಪುರುಷ ಪ್ರಧಾನ ಸಂಸ್ಕೃತಿಗೆ ಕೃಷಿ ಪದ್ಧತಿ ಮೀಸಲಾಯಿತು. ಪುರುಷ ಎಂದು ಪ್ರಾಬಲ್ಯಕ್ಕೆ

ಬಂದನೋ ಕೃಷಿ ಪಶುಪಾಲನೆಗಳು ಸಹ ತನ್ನ ಅಸ್ತಿತ್ವವನ್ನು ಕಂಡುಹಿಡಿಯಲು ಪ್ರಯತ್ನಿಸಿದವು.

ಗಂಡು-ಹೆಣ್ಣುಗಳು ಜೋಡಿಯಾಗಿಯೇ ಮುಂದೆ ಕೂಡಿಕೊಂಡು ಬೆಳೆದವು ಪುರುಷನೇ ಮೂಲ ಅಧಿಕಾರವನ್ನು ಪಡೆದುಕೊಂಡನು. ಆಗ ಹೆಣ್ಣಿನ ಸ್ಥಾನ ಹಿಂದೆ ಸರಿಯಿತು ಮಹಿಳೆಯನ್ನು ಕೇವಲ ಭೋಗದ ವಸ್ತುವಾಗಿ ನಾಲ್ಕು ಗೋಡೆಯ ಮಧ್ಯದಲ್ಲಿ ಅಡಿಗೆ ಮಾಡುವ ಸಾಧನವಾಗಿ. ಹೆರುವ ಯಂತ್ರವಾಗಿ ಕಂಡರೇ ವಿನಾಃ ಅವಳಿಗೆ ಸಂಪೂರ್ಣವಾದ ಸ್ವಾತಂತ್ರ್ಯವಾಗಲಿ. ಆಕೆಗೆ ಸಂಪೂರ್ಣ ಸಾಮಾಜಿಕ ನ್ಯಾಯವನ್ನು ಕೂಡಾ ಕೊಡದೆ ಪ್ರಪಂಚದಲ್ಲಿ ಅತ್ಯಂತ ಹೀನ. ದುರ್ಬಲ. ಅಸ್ಪೃಶ್ಯ ಹಾಗೂ ನಾಲ್ಕು ವರ್ಣಗಳಗಿಂತ ಸಂಪೂರ್ಣವಾಗಿ ದೂರ ತಳ್ಳಲಾಯಿತು.

ಧರ್ಮಗಳು ಸಹ ಮಹಿಳೆಯರಿಗೆ ತಿರಸ್ಕಾರವನ್ನು ನೀಡಿದವು. ಶಾಸ್ತ್ರ. ಪುರಾಣ. ಪ್ರಪಂಚ. ದೇಶವೇ ಸಂಪೂರ್ಣವಾಗಿ ಮಹಿಳೆಯನ್ನು ಅಲಕ್ಷಿಸಿದರು. ಇದರಿಂದ ಮಾನವನ ಇತಿಹಾಸ ದುರಂತಕ್ಕೆ ಕಾರಣವಾದದ್ದು ದುರ್ದೈವದಸಂಗತಿಯಾಗಿದೆ. ಭಾರತೀಯ ಮಹಿಳೆ ಭಾರತೀಯ ಸಮಾಜ ಬಹು ಸಂಸ್ಕೃತಿಯಿಂದ ಕೂಡಿದೆ. ಜಾತ್ಯಾತೀತ. ವರ್ಣತೀತ. ವರ್ಗಾತೀತವಾದ ರಾಷ್ಟ್ರವೆಂದು ಕರೆಯುತ್ತೇವೆ.

ಇವುಗಳೆಲ್ಲಾ ಹೇಳಿಕೆ ಭಾಷಣ ಹಾಗೂ ಲೇಖನದಲ್ಲಿಯೇ ಹೊರತು ಆಡಳಿತಾತ್ಮಕ ಅಥವಾ ಬರಿ ಮಾತಿನಲ್ಲಿಯೇ ಮಹಿಳೆಯನ್ನು ಕುರಿತು ಹಾಡಿ ಹೊಗಳುತ್ತೇವೆ. ವಿನಾಃ ದಾಖಲೆಗಳಲ್ಲಿ ಅಲ್ಲ ಎಂಬ ಕಡು ವಾಸ್ತವವನ್ನು ಕಾಣುತ್ತೇವೆ. ವೇದ ಆಗಮ ಉಪನಿಷತ್ತುಗಳಂತಹ ಶ್ರೇಷ್ಠವಾದ ಭಾರತೀಯ ಸಂಸ್ಕೃತಿಯ ಅಮೂಲ್ಯ ದಾಖಲೆಗಳೆಂದು ಹೇಳುತ್ತೇವೆ. ಇವುಗಳಲ್ಲಿಯೇ ಮಹಿಳೆಗೆ ಅಲ್ಲಲ್ಲಿ ಉಸಿರಾಡದ ಹಾಗೆ ಸ್ವಾತಂತ್ರ್ಯವನ್ನು ಕೊಟ್ಟರೆ ವಿನಾಃ ಸಂಪೂರ್ಣವಾಗಿ ಅಲ್ಲ ಋಗ್ವೇದದಲ್ಲಿಯೇ ಕೆಲವು ಹೊತ್ತಿನಲ್ಲಿ ಹೆಣ್ಣಿಗೆ ಒಂದು ನಿಮಿಷ ಉಸಿರಾಟಕ್ಕೆ ಅವಕಾಶ ಕಲ್ಪಿಸಿದ್ದಾರೆ. ಆ ಉಸಿರಾಟ ಇನ್ನು ತೆಗೆದುಕೊಂಡಿಲ್ಲವೇನೋ. ಅಥರ್ವಣ ವೇದಗಳ ಕಾಲಕ್ಕೆ ಸಂಪೂರ್ಣವಾಗಿ ಉಸಿರಾಟವನ್ನೆ ಕಿತ್ತುಕೊಳ್ಳಲಾಯಿತು.

ಅಥರ್ವಣವೇದವೇ ಸ್ಪಷ್ಟವಾಗಿ ಹೇಳುವಂತೆ ಹೆಣ್ಣು ಹುಟ್ಟುವುದು ಅಥವಾ ಹೆಣ್ಣು ಮಗು ಜನಿಸುವುದೇ ದುರದೃಷ್ಟಕರವಾದ ಸಂಗತಿಯೆಂದು ತಿಳಿದುಕೊಳ್ಳಲಾಯಿತು. ಉಪನಿಷತ್ತುಗಳು ನಮ್ಮ ಭಾರತೀಯ ಸಮಾಜದ ಬಹುಮೂಲ್ಯ ಆಸ್ತಿಗಳೆಂದು ಹೇಳುತ್ತೇವೆ.

ಆತ್ಮ ಜಿಜ್ಞಾಸೆ ಆತ್ಮ-ಅಧ್ಯಾತ್ಮ-ಸಮಾಜ ಸಂಸ್ಕೃತಿಯನ್ನೇ ಕುರಿತು ಆತ್ಮಾವಲೋಕನಕ್ಕೊಳಗಾದ ಕಾಲವಾಗಿತ್ತು.

ಅಂತಹ ಹೊತ್ತಿನಲ್ಲಿಯೇ ಭಾರತೀಯ ಪ್ರಮುಖ ಚಿಂತಕರಾಗಿದ್ದ ಗಾರ್ಗಿ, ಮೈತ್ರೇಯಿ, ಲೋಪಮುದ್ರೆರಂತಹ ಹಲವಾರು ಸ್ತ್ರೀಯರು ತಮ್ಮದೇ ಆದ ತಾತ್ವಿಕ ಚಿಂತನೆಗೆ ಒಳಗಾದರು. ಅಲ್ಲಿಂದಲೇ ಹೊಸ ಸಂಗತಿಗಳನ್ನೇ ಹೊರಹಾಕಲು ಮಹಿಳೆಗೆ ಕೊಟ್ಟ ಸ್ಥಾನಮಾನಗಳ ಬಗ್ಗೆ ಚಿಂತಿಸುವ ಕಾಲವಾಗಿತ್ತು. ಉಪನಿಷತ್ತು ಹುಟ್ಟುವ ಪೂರ್ವದಲ್ಲಿಯೇ ಬ್ರಹ್ಮದಾರಣ್ಯಕವೆಂಬ ಉಪನಿಷತ್ತಿನಿಂದಲೇ ನಮಗೆ ಇಂತಹ ಬಹು ಸಂಸ್ಕೃತಿಯ ಸಂಗತಿಗಳು ನೆನಪಿಗೆ ಬರುತ್ತವೆ. ಹೀಗಾಗಿಯೇ ಮಹಿಳೆಯ ಅಸ್ತಿತ್ವ ಪ್ರಾಚೀನ ಕಾಲದಲ್ಲಿ ಹೆಚ್ಚು ಸ್ಥಿರವಾಗಿ ನಿಲ್ಲದೆ, ಅದು ಕೆಲವೆ ಕೆಲವು ಸಂಗತಿಗಳಲ್ಲಿ ನೆಲೆ ನಿಂತು ಮಾಯವಾದದು ಪ್ರಪಂಚದ ಇತಿಹಾಸದಲ್ಲಿ ಸತ್ಯವಾದದು. ಧರ್ಮಶಾಸ್ತ್ರಗಲು ಸಂಪೂರ್ಣವಾಗಿ ಹೆಣ್ಣನ್ನು ಕಾಡತೊಡಗಿದವು ಸ್ಮೃತಿಕಾರರು, ಧರ್ಮಶಾಸ್ತ್ರಜ್ಞಗ್ರಂಥಗಳು, ಧರ್ಮವನ್ನು ತಾವೇ ಸೃಷ್ಟಿಸಿದರು. ಧರ್ಮವನ್ನು ಒಂದು ದೊಡ್ಡ ಪಂಗಡವನ್ನಾಗಿಸಿಕೊಂಡರು. ಪುರೋಹಿತ ಸಾಹಿತ್ಯದಲ್ಲಿ ಮೂಢನಂಬಿಕೆ ಅಜ್ಞಾನ ತುಂಬಿ ತುಳುಕುವಂತೆ ಮಾಡಿದರು. ಇದರಿಂದ ಶೈವ ಸಂಸ್ಕೃತಿಯ ಮಹಿಳೆ ಮೇಲೆ ಶೋಷಣೆ, ದಬ್ಬಾಳಕೆಗಳುಂಟಾದವು.

ಮಹಿಳೆಗೆ ಮುಕ್ತಿಯೆಂಬುದೆ ಇರಲಿಲ್ಲ, ಮಹಿಳೆಯ ಮೇಲೆ ಕಟ್ಟುಪಾಡುಗಳನ್ನು ಹಾಕಿದರು. ಪುರುಷ ಪ್ರಧಾನ ವ್ಯವಸ್ಥೆಯ ತೆಕ್ಕೆಗೊಳಗಾಗಿಯೇ ನಿಲ್ಲಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು. ಮಹಿಳೆ ಬಲಿಪಶುವಾದ ಸಂಗತಿ ಇತಿಹಾಸದ ಪ್ರಾಚೀನ ಹಾಗೂ ಇಂದಿನ ಕಾಲದವರೆಗೂ ನಿರಂತವಾಗಿ ನಡೆದುಕೊಂಡು ಬಂದಿರುವುದಕ್ಕೆ ಸಾಕ್ಷಿಯಾಗಿದೆ.

ಜೈನಧರ್ಮವು ಪ್ರಾಚೀನವಾದ ಧರ್ಮಗಳಲ್ಲೊಂದು. ಜೈನರು, ಜೈನೇತರರು ತಮಗೆ ಒದಗಿಬಂದ ಹತ್ತು ಹಲವು ಹೀನಾಯಾನ, ಮಹಾಯಾನ ಎಂಬ ಎರಡು ಪಮಥಗಲು ಹುಟ್ಟಿಕೊಂಡವು. ದಿಗಂಬರು ಕೂಡ ಜೈನರ ಧರ್ಮಶಾಸ್ತ್ರಿಗಳನ್ನು ಕುರಿತು ಸಮಗ್ರವಾದ ವಿಚಾರಗಳನ್ನು ಹೊರಹಾಕಿದರು. ಗಟ್ಟಿಯಾದ ಧರ್ಮಶಾಸ್ತ್ರದ ವಿವಿಧ ಮುಖಗಳ ಅನಾವರಣಮಾಡಿದರು. ಜೈನ ಧರ್ಮ ಅತ್ಯಂತ ಕಠಿಣವಾದ ಕಟ್ಟು ಪಡುಗಳನ್ನೆ ಹಾಕುವ ಮೂಲಕ ಸಂಪೂರ್ಣವಾಗಿ ಮಹಿಳೆಗೆ ಮುಕ್ತವಾದ ಸಮಾನ ಅವಕಾಶ ನೀಡಲಿಲ್ಲ. ಅತಿಯಾದ ಮನುಷ್ಯ ನಿಗ್ರಹಗಳನ್ನೇ ಮಾಡುತ್ತಾ ದೇಹದಂಡಿಸುವ ಪ್ರಾಣ ಹಿಂಸೆಯನ್ನು ಕೂಡಾ ಮಾಡದೇ ಅಹಿಂಸಾ ಪರಧರ್ಮವನ್ನೆ ಪ್ರತಿಪಾದಿಸಿದ ಜೈನರು ಬಹು ಮುಖ್ಯವಾದ

ಸಾಹಿತ್ಯ, ಕಲೆ, ಸಂಸ್ಕೃತಿ ಧರ್ಮಗಳ ಹೊಸ ಅರ್ಥಕಲ್ಪಿಸಿದ್ದಾರೆ. ಮಹಿಳೆಗೆ ಮಾತ್ರ ಮತ್ತೆ ಹಿಂದೂ ಸಂಸ್ಕೃತಿಯ ಆಚರಣೆಗಳಿಂದ ಅವಳಿಗೂ ದೂರವಿಡಲಾಯಿತು. ಬೌದ್ಧಧರ್ಮ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ಹಿಂದೂಧರ್ಮ ಹಾಗೂ ಪುರೋಹಿತ್ಯ ಸಾಹಿತ್ಯವನ್ನೇ ವಿರೋಧಿಸಿ ಮಾನವೀಯ ಮೌಲ್ಯಗಳ ಪ್ರತಿಪಾದನೆ ಮಾಡುವ ಮುಕ್ತವಾದ ಸಾಮಾಜಿಕ ನ್ಯಾಯಕೊಡಲು ಬದ್ಧವಾದ ಧರ್ಮ ಇದಾಗಿದೆ. ಆ ಕಾರಣಕ್ಕೆ ಪ್ರಜ್ಞೆ, ಶೀಲ, ಕರುಣೆಯಂತಹ ಹಲವಾರು ಮಾನವೀಯ ಮೌಲ್ಯ ಬಿತ್ತಿ ಬೆಳೆದರು. ಕಾರಣಿಕ ದಾಸೋಹದ ಕಲ್ಪನೆ ಜಗತ್ತಿಗೆ ಕೊಟ್ಟ ಬುದ್ಧ ಮಹಾದಾರ್ಶನಿಕ ಪ್ರಪಂಚದ ಎಲ್ಲಾ ಧರ್ಮಗಳೂ ಕೂಡಾ ಮನನ ಮಾಡಿಕೊಂಡು ತನ್ನ ರಾಜ್ಯದ ಗಡಿಪಾರು ಮಾಡುವ ಹೊತ್ತಿಗೆ ಎಲ್ಲವೂ ತೊರೆದು ಮಧ್ಯ ಹಾಡು ಹಗಲಲ್ಲಿ ಎಲ್ಲರ ಸಮ್ಮುಖದಲ್ಲಿ ಆ ನಾಡಿನ ಸಮಗ್ರ ಪ್ರಜೆಗಳ ಹಾಗೂ ಅರಮನೆಯ ಹಿರಿಯರೆಲ್ಲರ ಒಪ್ಪಿಗೆ ಕಾಡಿಗೆ ಹೋದ ಬೌದ್ಧ ಧರ್ಮ, ಮೋಸ, ವಂಚನೆ, ಹಿಂಸೆ, ಇವುಗಳನ್ನೆ ದೂರತಳ್ಳುತ್ತದೆ. ಹೀಗಾಗಿಯೇ ಜಗತ್ತಿನ ಎಲ್ಲಾ ಚಿಂತನಧಾರೆಗಳು ಇಲ್ಲಿ ಅಡಗಿಕೊಂಡು ಕೂಡಿವೆ.

ಬುದ್ಧ ಸಾರ್ವಕಾಲಿಕ ಸತ್ಯವಾದ ಮಾನವೀಯ ಮೌಲ್ಯಗಳ ಪ್ರತಿಪಾದಕರಾದವರು ಮಹಿಳೆಗೆ ಮೊದಮೊದಲು ಸಹ ಬೌದ್ಧ ಸಂಘದಲ್ಲಿ ಸೇರಿಸಿಕೊಳ್ಳಲಿಲ್ಲ ಕಾರಣವಿಷ್ಟೆ, ತನ್ನ ಸಂಘದ ಮೇಲೆ ಬೌದ್ಧ ಪ್ರಚಾರಕರ ಮೇಲೆ ನಂಬಿಕೆ, ವಿಶ್ವಾಸ, ಪ್ರೀತಿ ಬರುವವರೆಗೂ ಸಹ ಮಹಿಳೆಗೆ ಒಪ್ಪಿಗೆ ನೀಡಲಿಲ್ಲ. ಧೃಡಸಂಕಲ್ಪ ಹೊಂದಿದ ಮೇಲೆ ಸ್ವತಃ ತನ್ನ ಮಡದಿ-ತಾಯಿಯನ್ನು ಸೇರಿಸಿಕೊಂಡನು. ಬೌದ್ಧ ಸಂಘದಲ್ಲಿ ಪ್ರಜಾಪತಿ, ಸುಜಾತ, ಅಮ್ರಪಾಲಿ, ಮುಂತಾದ ಐನೂರಕ್ಕೂ ಹೆಚ್ಚು ಬೌದ್ಧ ಬಿಕ್ಷುಣಿಯರು ಬೌದ್ಧ ಸಂಘದಲ್ಲಿ ಸೇರಿಸಿಕೊಂಡನು.

ಅವರೆಲ್ಲರೂ ಧರ್ಮ ಪ್ರಚಾರ ಕೈಗೊಂಡರು. ಮಹಿಳೆಯರು ಸಂಪೂರ್ಣವಾಗಿ ಬೌದ್ಧ ಸಂಘದಲ್ಲಿ ಸೇರಿಕೊಂಡ ಮಹಿಳೆಗೆ ಸ್ಥಾನಮಾನವನ್ನೆ ಹೊಂದಿದರು ಯಾವಾಗ ಬೌದ್ಧ ಧರ್ಮ ಪ್ರಸಾರ ಹೊಂದಿ ತನ್ನತನ ಮೇಲುಗೈ ಸಾಧಿಸಿತು. ಇದರಿಂದ ಕೆಲವು ಧರ್ಮಗಳ ಕೆಂಗಣ್ಣಿಗೆ ಗುರಿಯಾಯಿತು. ಮೊದಲು ಪುರುಷನಿಗೆ ಸಮಾನವಾಗಿ ಕಾಣದಿದ್ದರೂ ಪುರುಷನಿಗಿಂತ ಮಹಿಳೆಗೆ ನಂತರದಲ್ಲಿ ಹೆಚ್ಚಿನ ಸ್ಥಾನಕಲ್ಪಿಸಲಾಯಿತು. ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳಲ್ಲಿ ಸಹಿತ ಹೆಣ್ಣನ್ನು ಸಂಪೂರ್ಣವಾಗಿ ವಿರೋಧಿ ನೆಲೆಗಳಲ್ಲಿ ನೋಡಲಾಗಿದೆ. ಧರ್ಮಶಾಸ್ತ್ರ ರಾಜ-ಮಹಾರಾಜರ ಆಶ್ರಯ ಕಲ್ಪನೆಗಳಲ್ಲಿ ಹೊಸದೊಂದನ್ನು ಕೊಡಲು ಪ್ರಯತ್ನಿಸಿದ್ದಾರೆ.

ತಾಯಿಯಾಗಿ ಮಾತ್ರ ಈ ಎರಡು ಮಹಾಕಾವ್ಯಗಳು ಹೆಣ್ಣನ್ನು ಕಂಡರೆ ಹೊರತು ಉಳಿದೆಲ್ಲ ದೃಷ್ಟಿಯಿಂದ ಆಕೆಯನ್ನು ಸಂಪೂರ್ಣವಾಗಿ ತಿರಸ್ಕರಿಸಿದ್ದಾರೆ. ತಾಯಿಯ ಸ್ಥಾನ ಕೊಟ್ಟು ತಲೆ ಬಡಿದು ಮಹಿಳೆಗೆ ಕೂಡಿಸಿದರು. ಪುರುಷರ ಆಧೀನದಲ್ಲಿಯೇ ನೆಲೆಸಬೇಕಾಗಿದೆ. ಪುರುಷರನ್ನು ಸಂಪೂರ್ಣವಾಗಿ ಹೆಣ್ಣು ತನ್ನ ಸ್ವಾಧಿನನೆಂದು ಕಂಡುಕೊಂಡು ತನ್ನ ಪ್ರತಿಯೊಂದು ಕೆಲಸ ಕಾರ್ಯಗಳಲ್ಲೂ ಸಹ ಮಹಿಳೆಗೆ ಮುಕ್ತವಾದ ಅವಕಾಶ ನೀಡಲಿಲ್ಲ. ಮಹಿಳೆಯ ಸಂಪೂರ್ಣ ಸ್ವಾಧೀನಕ್ಕೆ ಒಳಪಡಿಸಿಕೊಂಡರು ಪುರುಷನ ಅಧಿಕಾರ ದಬ್ಬಾಳಿಕೆ ಆಸ್ತೀಯ ಒಂದು ಭಾಗವೇ ರಾಮಾಯಣ, ಮಹಾಭಾರತ ಕಾವ್ಯಗಳು ಚಿತ್ರಿಸಿವೆಯೇ ಹೊರತು ಮಾನವೀಯ ನೆಲೆಯ ಪ್ರಬುದ್ಧ ಭಾರತ ನಿರ್ಮಾಣ ಮಾಡುವ ಅಂಶಗಳು ಈ ಕಾವ್ಯದಲ್ಲಿ ದೊರಕದಿರುವುದೇ ಸೋಜಿಗವಾಗಿದೆ. ಭೋಗದ ವಸ್ತುವಾಗಿ ತನ್ನ ಸ್ವಾಧೀನಕ್ಕೊಳಪಡಿಸಲಾಯಿತು. ನಾಲ್ಕು ಗೋಡೆಯ ಮಧ್ಯದಲ್ಲಿ ಬಂಧಿಸಲಾಯಿತು ಮಹಿಳಾ ಬದುಕು ದಾರುಣವಾದ ಸ್ಥಿತಿಯನ್ನು ಅನುಭವಿಸಿಕೊಂಡು ಬರಲಾಯಿತು.

ಸೀತೆ ದ್ರೌಪದಿ, ಮಂಡೋಧರಿಯಂತಹ ಅನೇಕ ಮಹಿಳೆಯರ ಚಿತ್ರಣ ಕೇವಲ ಹೊರ ನೋಟಕ್ಕೆ ಸಿಗುತ್ತವೆಯೇ ಹೊರತು ಒಳನೋಟದಲ್ಲಿ ಅಲ್ಲವೆಂಬುದು ಸಾರ್ವಕಾಲಿಕವಾದ ಸತ್ಯ. ವಚನ ಸಾಹಿತ್ಯ ಹನ್ನೆರಡನೇಯ ಶತಮಾನವೂ ಬಹುಮುಖಿ ನೆಲೆಗಳಲ್ಲಿ ತನ್ನ ಚಿಂತನಾಧಾರೆಗಳನ್ನೆ ಹರಿಸಿ ಭಕ್ತಿ ಸಾಹಿತ್ಯ ಚಳುವಳಿಯನ್ನೇ ಹೊರ ಹಾಕಿತು. ವರ್ಣಾಶ್ರಮ ಪದ್ಧತಿ ಮತ್ತು ಪುರೋಹಿತ ಸಾಹಿತ್ಯದ ಹೋರಾಟದ ನೆಲೆಗಲನ್ನು ಕಾಣಲು ಪ್ರಯತ್ನಿಸಲಾಯಿತು. ಅವುಗಳನ್ನು ತಿರಸ್ಕರಿಸಿ ಹೊಸ ಸಂವೇದನೆ ಕಟ್ಟಿಕೊಡಲು ಬದುಕಿನ ನಾನಾ ಹಂತಗಳನ್ನು ರೂಪಿಸಲು ಪ್ರಮಾಣೀಕರಿಸಲಾಯಿತು. ವಚನಯುಗ ಕ್ರಾಂತಿ ಪಥದತ್ತ ಹೊಸ ಮನ್ವಂತರದ ಹಾಡನ್ನು ಹಾಡಲಾಯಿತು. ಶರಣರ ಚಳುವಳಿಗೆ ಹೊಸದಾದ ಭಾಷೆ ಬರೆಯುವ ಕೆಳವರ್ಗವೆಂದು ಕರೆಯಲಾಯಿತು. ಅದರಲ್ಲಿ ಮೇಲೆತ್ತುವ ಪಥದಲ್ಲಿ ದಲಿತ ಚಳುವಳಿ ಶರಣರ ಚಳುವಳಿಯೇ ಆಗಿದೆ. ಇಲ್ಲಿ ಮೂವತ್ತೈದು (೩೫) ವಚನಕಾರ್ತಿಯರಾಗಿ ವಚನ ರಚಿಸಿ ಸಂಪೂರ್ಣವಾದ ರೀತಿಯಲ್ಲಿ ಸಹಕಾರ ಕೊಡುವ ಹಂತವನ್ನು ಕೈಗೊಂಡಿದ್ದು, ಅನುಭವ ಮಂಟಪದಲ್ಲಿ ಮುಕ್ತ ಸ್ವಾತಂತ್ರ್ಯ ಸ್ವಾಭಿಮಾನವನ್ನು ಕಲ್ಪಿಸಲಾಯಿತು. ಮಹಿಳೆಗೆ ಶೋಷಣೆಯಿಂದ ಹೊರಬಂದು ಸಾಮಾಜಿಕ ನ್ಯಾಯವನ್ನು ಒದಗಿಸಲು ಸ್ವತಂತ್ರ ಆಲೋಚನೆಯನ್ನು ಮಾಡಲು ಹಾತೊರೆದವು. ದಾಸ ಸಾಹಿತ್ಯದ ಬಹುಮುಖ್ಯ ನೆಲೆಗಳಲ್ಲಿ ಭಕ್ತಿ, ಆರಾಧನೆಯೇ ಮುಖ್ಯವಾಗಿದೆ. ಭಕ್ತಿ ಮೂಲಕ ಅಧ್ಯಾತ್ಮಿಕ ಚಿಂತನೆಯ ಸಾಮಾಜಿಕ ಸಂವೇದನೆಯನ್ನು ಕಟ್ಟಿಕೊಡಲು ಪ್ರಯತ್ನಿಸಿದವು. ದಾಸ ಸಾಹಿತ್ಯದ ಪ್ರಮುಖವಾದ ಸಮಾಜದ ಜೊತೆಗೆ ಸಂಗೀತ, ಲಯ, ಸ್ಥಾನಮಾನವನ್ನು ಹೊಂದಲಾಯಿತು. ಭಕ್ತಿ ಸಂಗೀತದ ಜೊತೆಗೆ ಮಹಿಳಾ ಸಾಹಿತ್ಯದ ಹೊಸತನದಲ್ಲಿ

ಮಹಿಳೆಗೆ ಅವಕಾಶ ಕಲ್ಪಿಸಿದ್ದು ಬೆರಳೆಣಿಕೆಯಷ್ಟು. ಅವರಲ್ಲಿ ಗಲಗಲಿ ಅವ್ವ, ಹರಪ್ಪನಹಳ್ಳಿ ಭೀಮವ್ವ ರಂತಹ ಕೆಲವೇ ಅಂದರೆ ಐದಾರು ಜನ ಕೀರ್ತನಕಾರ್ತಿಯರು ದೊರಕುತ್ತಾರೆ. ಸ್ವರ ವಚನ ತತ್ವಪದಕಾರರು ಹಾಗೂ ಸೂಫಿಸಂತರ ಕಾವ್ಯದಲ್ಲಿ ಹಾಗೂ ಯುಗದಲ್ಲಿ ಯಾನ ಸಹಿತ ಮಹಿಳೆಯರಿಗೆ ಸಂಪೂರ್ಣವಾದ ಮಾಹಿತಿಗಳನ್ನು ಪಡೆಯುತ್ತಾರೆ. ಇಲ್ಲಿಯೇ ಮಹಿಳೆಗೆ ಸಾಕಷ್ಟು ಪ್ರಭಾವಿತವಾದ ಮಹಿಳೆ ಬಹು ಮುಖ್ಯ ನೆಲೆಗಳಲ್ಲಿ ಮಹಿಳೆ ಸಂಪೂರ್ಣ ಸ್ವಾತಂತ್ರ್ಯ ಕೊಡಲಿಲ್ಲವೆಂಬುದಂತು ಸತ್ಯವಾದದ್ದು.

ಮಹಿಳೆಗೆ ಸಂಪೂರ್ಣವಾದ ಸ್ವಾತಂತ್ರ್ಯವಿಲ್ಲದೆ ಅನೇಕ ಸಂದಿಗ್ಧತೆಯಲ್ಲಿ ತನ್ನ ನೆಲೆ ಕಂಡುಕೊಳ್ಳದೆ ಶೃಂಗಾರದ ಗೊಂಬೆಯಾಗಿ ಭೋಗ ವಿಲಾಸದ, ಹೆರುವ ಯಂತ್ರವಾಗಿ ಗಂಡಿನ ಗುಲಾಮಳಾಗಿ ಬಾಳುವ ಅವಕಾಶವನ್ನು ಸಹ ಪಡೆಯಲಾಯಿತು. ಸಂಪೂರ್ಣ ವಿಮೋಚನೆ ಹೊಂದಲಿಲ್ಲ.

# ಅಧ್ಯಾಯ-೩
# ಜನಪದ ಮತ್ತು ಸ್ತ್ರೀ ವಾದ

೧. ಸ್ತ್ರೀವಾದದ ಹುಟ್ಟು

೨. ಸ್ತ್ರೀವಾದದ ದಾರಿ

೩. ಸ್ತ್ರೀವಾದ

**೧. ಸ್ತ್ರೀವಾದದ ಹುಟ್ಟು :**

ಸ್ತ್ರೀವಾದದ ಅಥವಾ ಫೆಮಿನಿಸಂ. ಇಂದು ಜಾಗತಿಕ ಸಿದ್ಧಾಂತದ ರೂಪದಲ್ಲಿ ಬೆಳೆಯುತ್ತಿರುವ ಸ್ತ್ರೀವಾದ ಹಲವು ಬಗೆಯ ಸವಾಲುಗಳಿಗೆ ಎದುರಾಗುತ್ತಲೇ ಇದೆ.

ಪಾಶ್ಚಾತ್ಯ ದೇಶಗಳಲ್ಲಿ ಅದು ಎದುರಿಸುತ್ತಿರುವ ಸವಾಲುಗಳಿಗಿಂತ ಭಾರತೀಯ ಸಂದರ್ಭದಲ್ಲಿ ಭಿನ್ನವಾದ ಗೊಂದಲ, ಗುಮಾನಿಗಳನನೇ ಹುಟ್ಟುಹಾಕಿದೆ.

ಸ್ತ್ರೀವಾದದ ಬಗೆಗೆ ಇರುವಂತಹ ಈ ದಿಗಿಲು ಮತ್ತು ಆತಂಕಗಳು ಬಹುಶಃ ನಮ್ಮ ಯಾವ ಸಿದ್ಧಾಂತ ಅಥವಾ ಚಳುವಳಿಗಳ ಮುಂದೆ ಇಲ್ಲ ಅನ್ನಿಸುತ್ತದೆ. ಇಲ್ಲಿ ಸ್ತ್ರೀವಾದದ ಸೈದ್ಧಾಂತಿಕ ತಿಳುವಳಿಕೆಯ ಮಿತಿಯ ಜೊತೆಗೆ ನಮ್ಮ ಪೂರ್ವಗ್ರಹಿತ ಆಲೋಚನೆ ವಿಧಾನಗಳು ಕೆಲಸ ಮಾಡಿವೆ.

ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದ ಹೊತ್ತಿರುವ ತಪ್ಪುಕಲ್ಪನೆ ಎಂದರೆ ಸ್ತ್ರೀವಾದ ಪಶ್ಚಿಮದ ಆಮದು ಸರಕು, ಇದು ನಮ್ಮ ಸಾಂಸ್ಕೃತಿಕ ಪರಂಪರೆಗೆ, ಸಾಮಾಜಿಕ ಸಂದರ್ಭಗಳಿಗೆ ಬಗ್ಗವುದಿಲ್ಲ ಎನ್ನುವದು. ವಿಶ್ವಾತ್ಮಕ ನೆಲೆಯಲ್ಲಿ ನಿಂತು ಮಾತಾಡುವ ವರ್ಗ ಈ ಆರೋಪವನ್ನೇ ನಿರಾಕರಿಸಿದರೆ, ದೇಶಿಯ ಚಿಂತಕರು ಭಾರತೀಯ ಸಂದರ್ಭ, ಒತ್ತಾಯಗಳಿಗೆ ಹೊಂದುವಂತೆ ಪಾಶ್ಚಾತ್ಯ ಸ್ತ್ರೀವಾದವನ್ನೆ ಮರು ಸೃಷ್ಟಿಸಬೇಕಾಗಿದೆ ಎಂದು ಪ್ರತಿಪಾದಿಸುತ್ತಾರೆ. ಯಾವುದೇ ಒಂದು ಜನಸಮುದಾಯದಲ್ಲಿ ಗಂಡು ಹೆಣ್ಣು ಇರುತ್ತದೆ ಮತ್ತು ಆ ಸಂಸ್ಕೃತಿಯ ರಚನೆಯಲ್ಲಿ ಅವರ ಪಾಲ್ಗೊಳ್ಳುವಿಕೆ ಸಹಜವಾದುದು. ಆದರೆ ನಮ್ಮ ಪುರುಷ ಕೇಂದ್ರಿತ ಸಮಾಜದ ಇತಿಹಾಸ, ಆರ್ಥಿಕ, ರಾಜಕೀಯ ಪರಿಕಲ್ಪನೆಗಳು ಹೆಣ್ಣಿನ ಅಸ್ತಿತ್ವವನ್ನು ದಾಖಲಿಸದೆ ಹೋಗಿವೆ.

ಗಂಡಿನ ಕಾರ್ಯಾಚಟುವಟಿಕೆ ಅವರ ಅನುಭವ ಮತ್ತು ಅವಲೋಕನಗಳು ಇಂತಹ ಈ ಅಧ್ಯಯನದಲ್ಲಿ ತುಂಬಿಕೊಂಡಿವೆ. ಪುರುಷರು ಕ್ರಿಯಾ ಚಟುವಟಿಕೆಗಳಲ್ಲಿ

ತೊಡಗಿಕೊಂಡಿದ್ದಾಗ ಸ್ತ್ರೀಯರ ಪಾತ್ರ ಅಥವಾ ಕಾರ್ಯ ಏನಿತ್ತು? ಅವಳ ಬದುಕಿನ ಅನುಭವಗಳೇನು? ಅವಳ ಲೋಕದೃಷ್ಟಿ ಏನಿತ್ತು? ಎನ್ನುವ ಪ್ರಶ್ನೆಗಳಗೆ ಈ ಅಧ್ಯಯನಗಳು ಉತ್ತರಿಸಲು ಮೌನ ತಾಳುತ್ತವೆ.

ಆದರೆ ಹೆಣ್ಣಿನ ಚರಿತ್ರೆ, ಪರಂಪರೆ ಇರಲಿಲ್ಲ ಎಂದಲ್ಲ. ಪುರುಷ ರಾಜಕಾರಣ ಅವಳನ್ನು ಮರೆಗೆ ತಳ್ಳಿದೆ. ಹೀಗಾಗಿ ಹೆಣ್ಣಿಗೆ ಸಂಸ್ಕೃತಿಯೊಂದಿಗೆ ನಮಗೆ ತೋರುವುದಕ್ಕಿಂತ ಹೆಚ್ಚಿನ ಸಂಬಂಧವಿದೆ. ನಮ್ಮ ಮುಂದಿರುವ ಇತಿಹಾಸವು ಬೇಟೆ, ಯುದ್ಧ, ದಿಗ್ವಿಜಯ, ರಾಜ್ಯವಿಸ್ತರಣೆ, ಸೃಜನ ಪರಂಪರೆಯಂತಹ ಹಂತದ ವೀರತೆಯನ್ನು ಹಾಗೂ ಅವರ ಅನುಭವಗಳನ್ನು ಮಹತ್ವೀಕರಿಸುವ ದಾಖಲೆಯೇ ಆಗಿದೆ. ಈ ನಿಲುವು ಗಂಡಿನ ಚಟುವಟಿಕೆಗಳನ್ನು ಮುಖ್ಯ ಎಂದು ಗ್ರಹಿಸುವುದರಿಂದ ಹೆಣ್ಣಿನ ಗರ್ಭಧಾರಣೆ, ತಾಯ್ತನ, ಸಂಗೋಪನ, ಲೈಂಗಿಕತೆಗಳಂತಹ ಚಟುವಟಿಕೆಗಳನ್ನೇ ಅಮುಖ್ಯವಾಗಿ ಕಂಡಿದೆ, ಅಥವಾ ತೀರಾ ಸಾಮಾನ್ಯ ಎಂದು ನಿರಾಕರಿಸಲಾಗಿದೆ. ಹೀಗೆ ಮರೆಯಾದ, ಹೇಳಲಾದ ಮಹಿಳಾ ಮುಖವನ್ನೆ ಹೊರ ತೆಗೆದು ಹೆಣ್ಣಿನ್ನ ಚರಿತ್ರೆಯನ್ನು ಕಟ್ಟಬೇಕಾಗಿದೆ.

ಹೂತು ಹೋದ ಈ ಇತಿಹಾಸದ ಸಿಕ್ಕನ್ನು ಬಿಡಿಸುವುದು ತುಂಬ ಕಷ್ಟದ ಕೆಲಸ. ಅದಕ್ಕೆ ಪುರುಷ ಪರವಾದ ಅಧ್ಯಯನದ ಸತ್ಯಗಳ ಮಧ್ಯದ ಸೀಳುಗಳನ್ನೇ ಕಾಣಬೇಕು. ಅಲ್ಲಿನ ಹೆಣ್ಣಿನ್ನ ಮಾನ ಸಾಂಸ್ಕೃತಿಕ ಸೂಕ್ಷ್ಮಗಳನ್ನ ಆಲಿಸಬೇಕು. ಆ ಪಿಸುಗುಟ್ಟುವಿಕೆಯ ಸಪ್ತಸ್ವರವನ್ನೆ ರಕ್ಷಿಸಿಕೊಳ್ಳಬೇಕು. "ಈ ಮೌನಗಳನ್ನು ಆಲಿಸುವುದು ಕಷ್ಟ, ಆದರೆ ಹೆಣ್ಣಿನ ಅನುಭವಗಳನ್ನು ಅರ್ಥ ಮಾಡಿಕೊಳ್ಳಲು ಇದು ತೀರಾ ಅವಶ್ಯಕ".

ನಮ್ಮ ಈ ಹುಟುಕಾಟವನ್ನೇ ಪುರುಷ ಕೇಂದ್ರಿತಕ್ಕೆ ಪರ್ಯಾಯವಾಗಿ ಸ್ತ್ರೀ ಕೇಂದ್ರಿತಗೊಳಸುವುದರಿಂದ ಸಾಧ್ಯವಾಗುವುದಿಲ್ಲ. ಹಾಗಾದರೆ ಅದು ಇನ್ನೊಂದು ಕೊರಕರಿಗೆ ಬೀಳುವ ಅಪಾಯವಿದೆ ಅಥವಾ ಈಗಿರುವ ಅಧ್ಯಯನ ವಿಧಾನಕ್ಕೆ ಹೆಣ್ಣನ್ನೆ ಸೇರಿಸುವುದರಿಂದ ಸಾಧ್ಯವಾಗುವುದಿಲ್ಲ. ಯಾಕೆಂದರೆ "ಸಾಂಪ್ರದಾಯಿಕ ಸಿದ್ಧಾಂತಗಳನ್ನೇ ಅನ್ವಯಿಸುವುದರಿಂದ ಸಾಮಾಜಿಕ ಬದುಕಿನಲ್ಲಿ ಸ್ತ್ರೀಯರ ಪಾಲ್ಗೊಳ್ಳುವಿಕೆಯನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ ಅಥವಾ ಗಂಡಸರ ಚಟುವಟಿಕೆಗಳು ಲಿಂಗಾಧಾರಿತವಾಗಿವೆ ಎಂದು ಸಾಧಿಸಲು ಆಗುವುದಿಲ್ಲ". ಹೀಗಾಗಿ ಈಗಿರುವ ತುರ್ತು ಎಂದರೆ ಅಧ್ಯಯನ ಪರಿಕಲ್ಪನಾತ್ಮಕ ಚೌಕಟ್ಟನ್ನು ಮತ್ತು ವಿಧಾನವನ್ನೇ ಮರುರಚಿಸುವ, ಆಗ ಮಹಿಳೆಯರು ನಿಜವಾಗಿ ಏನು ಆಗಿದ್ದಾರೆ, ಪುರುಷರು ಸ್ತ್ರೀಯರ ಬಗ್ಗೆ ಏನು ಆಡುತ್ತಿದ್ದಾರೆ ಎನ್ನುವುದನ್ನು ತಿಳಯಲು ಸಾಧ್ಯವಾಗುತ್ತದೆ. ಇಂತಹ ಮಹಿಳಾ

ಸಂಕಷ್ಟಗಳಿಂದ ಕಲ್ಪಿತ ಇತಿಹಾಸ ಕಟ್ಟಿಕೊಡದ ಸ್ತ್ರೀತ್ವವನ್ನೇ ಕಂಡುಕೊಳ್ಳುವುದು ಸಾಧ್ಯವಾಗುತ್ತದೆ.

ನಮ್ಮ ಈವರೆಗಿನ ಅಧ್ಯಯನಗಳು ಅದು ಸಾಹಿತ್ಯವಿರಲಿ, ಜನಪದವಿರಲಿ, ಮನಃಶಾಸ್ತ್ರವಿರಲಿ, ಅರ್ಥಶಾಸ್ತ್ರವಿರಲಿ ಅಥವಾ ಅಭಿವೃದ್ಧಿ ಮಾದರಿಗಳಿರಲಿ ಎಲ್ಲವೂ ಪುರುಷರ ಧೋರಣೆಯಿಂದಲೇ ರೂಪಿತವಾಗಿದೆ. ಯಾಕೆಂದರೆ ಈ ಎಲ್ಲ ಅಧ್ಯಯನಕಾರರು ಪುರುಷರಾಗಿದ್ದು, ಮಾಹಿತಿದಾರರು ಮತ್ತು ಸಂಗ್ರಾಹಕರು ಕೂಡ ಪುರುಷರೇ ಆಗಿದ್ದಾರೆ. ಇಂತಹ ಮಾಹಿತಿಗಳಿಂದ ಆಧರಿತವಾದ ವಿಶ್ಲೇಷಣೆಗಳಲ್ಲಿ ಪುರುಷರ ದೃಷ್ಟಿ ಹಾಗೂ ಧ್ವನಿಯಷ್ಟೇ ದಾಖಲಾಗಿದೆ. ಹಾಗೇ ಮಾಡುವ ಮೂಲಕ ಮಹಿಳೆಯರ ಕೊಡುಗೆಯನ್ನು ಸಂಪೂರ್ಣವಾಗಿ ನಿರಾಕರಿಸಿ ಇತಿಹಾಸದ ಜಗತ್ತಿನಿಂದ ಅಂಚಿಗೆ ತಳ್ಳಲಾಗಿದೆ. ಪುರುಷರ ಈ ಬಗೆಗಿನ ದೃಷ್ಟಿಕೋನವು ಇತಿಹಾಸದ ವಾಸ್ತವವನ್ನೇ ಮರೆಮಾಡಿದೆ. ಮುಚ್ಚಿ ಹಾಕಲಾದ ಈ ಮಹಿಳಾ ಮುಖದ ಶೋಧದ ಮೂಲಕ ಸಂಸ್ಕೃತಿಯ ಮರುರಚನೆ ಆಗಬೇಕಾಗಿದೆ.

ಸ್ತ್ರೀವಾದ ಈ ಬಗೆಯ ಅಧ್ಯಯನ ವಿಧಾನವಾಗಿದ್ದು, ಸಮಾಜವೊಂದರ ಲಿಂಗ ಪ್ರಭೇದ ನೀತಿಯನ್ನು ಪ್ರತಿರೋಧಿಸುವುದರೊಂದಿಗೆ ಸ್ತ್ರೀ ಸಂಸ್ಕೃತಿಯ ಕಟ್ಟವಿಕೆಯ ಪ್ರಯತ್ನವಾಗಿದೆ.

**೨. ಸ್ತ್ರೀವಾದದ ದಾರಿ:**

ಸುಮಾರು ಎರಡು ದಶಕಗಳಿಂದ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸ್ತ್ರೀವಾದಿ ಪರಿಕಲ್ಪನೆ ಬೆಳೆದು ಬರುತ್ತಿದೆ. ಸಾಹಿತ್ಯ ವಿಮರ್ಶಾ ವಿಧಾನವಾಗಿ ಸ್ತ್ರೀವಾದಿ ವಿಮರ್ಶೆ ತನ್ನದೇ ಆದ ಸ್ಪಷ್ಟ ಕವಲು ದಾರಿಯನ್ನೆ ನಿರ್ಮಾಣ ಮಾಡುವಂತಹ ಗಂಭೀರ ಚಿಂತನೆ ನಡೆಸಿದೆ. ಈ ಮಧ್ಯದಲ್ಲಿ ಸ್ತ್ರೀವಾದ ಬಹಳ ಶೋಕಿ ಮತ್ತು ಸೋಲಿ ವಿಷಯಗಳ ಬಳಕೆಯಾಗುತ್ತಿರುವ ಅಪಾಯಕಾರಿ ಪ್ರವೃತ್ತಿಗಳು ಕಾಣಿಸಿವೆ.

ಸ್ತ್ರೀವಾದದ ಸೂಕ್ಷ್ಮಗ್ರಹಿಕೆ ಮತ್ತು ಗಂಭೀರ ಅಧ್ಯಯನದ ಕೊರತೆಯಿಂದ ಇಂತಹ ಸಂದರ್ಭ ಎದುರಾಗಿದೆ.

ಸ್ತ್ರೀವಾದದ ಜನಪದ ಅಧ್ಯಯನಕ್ಕೆ ಪ್ರವೇಶವಾದುದು ತೀರಾ ಈಚೆಗೆ ಕನ್ನಡ ಸ್ತ್ರೀವಾದಿ ವಿಮರ್ಶೆಗಳು ಪಾಶ್ಚಾತ್ಯ ಸ್ತ್ರೀವಾದಿ ಸಿದ್ಧಾಂತದ ಅನುಕರಣೆಯಲ್ಲಿ ನಡೆದರೆ

ಸ್ತ್ರೀವಾದಿ ಜನಪದ ಅಧ್ಯಯನವು ಕೂಡಾ ಅದೇ ಜಾಡಿನಲ್ಲಿ ಸಾಗಿದ್ದು ತನ್ನದೇ ಆದ ದಾರಿಯ ಗುರುತುಗಳನ್ನು ಮೂಡಿಸುವುದು ಅದಕ್ಕೆ ಸಾಧ್ಯವಾಗಿಲ್ಲ.

ಇದುವರೆಗಿನ ಸ್ತ್ರೀವಾದಿ ಜನಪದ ಬರಹಗಳು ಜಾನಪದದಲ್ಲಿನ ಹೆಣ್ಣಿನ ಚಿತ್ರಣಗಳಾಗಿವೆಯೇ ಹೊರತು ಹೆಣ್ಣುತನದ ಅಸ್ತಿತ್ವದ ಚಿತ್ರವಾಗಿಲ್ಲ. ಭಾರತೀಯ ಸ್ತ್ರೀವಾದ ೧೯೯೩ ನೇರವಾಗಿ ಜನಪದಕ್ಕೆ ಅನ್ವಯಿಸಿ ಬಂದ ಕೃತಿ ಅಲ್ಲದಿದ್ದರೂ ಇಲ್ಲಿನ ಟಿ.ಆರ್.ನಾಗರಾಜ್ ಹಾಗೂ ಮನು ಚಕ್ರವರ್ತಿ ಅವರ ಬರಹಗಳು ಭಾರತದಂತಹ ಬಹುರೂಪಿ ಸಂದರ್ಭದಲ್ಲಿ ಸ್ತ್ರೀವಾದ ಪಡೆದುಕೊಳ್ಳಬೇಕಾದ ಆಕೃತಿಯ ಚರ್ಚೆಯಲ್ಲಿ ಮೌಖಿಕ ಪರಂಪರೆ ಹಾಗೂ ಮಾತೃರೂಪಿ ಸಾಂಸ್ಕೃತಿಕ ರಚನೆಗಳನ್ನ ಪ್ರಧಾನವಾಗಿ ಗ್ರಹಿಸುತ್ತವೆ.

ನಮ್ಮ ಮಹಿಳಾ ವಿಮೋಚನಾ ಮಾದರಿಯನ್ನೆ ಮೌಖಿಕ ಪರಂಪರೆಗಳು ಪ್ರಕಟಿಸುವ ಸ್ತ್ರೀಶಕ್ತಿಯ ಸಮೃದ್ಧತೆಯಲ್ಲಿ ಕಟ್ಟಿಕೊಳ್ಳಬೇಕಾಗಿದೆ ಎನ್ನುವ ಇಲ್ಲಿನ ಸುಳಿವು ನಮ್ಮ ಸ್ತ್ರೀವಾದಿ ಜನಪರ ಅಧ್ಯಯನ ನಡೆಯಬೇಕಾದ ಹಾದಿಗೆ ಹೊಸ ಕದ ತೆರೆಯುವಂತಹದು. ಇಲ್ಲಿಯೂ ಹೇಳಬೇಕಾದ್ದು ವಿವೇಕ ರೈ ಅವರ 'ಗಿಳಿಸೂವೆ' ಯ ಕೆಲವು ಲೇಖನಗಳು. ರೈ ಅವರು ಇಲ್ಲಿನ ಸ್ತ್ರೀವಾದಿ ಬರಹಗಳ ವಿಶಾಲ ಚೌಕಟ್ಟಿನಲ್ಲಿ ಪ್ರಾಸಂಗಿಕವಾಗಿ ಕನ್ನಡ ಜನಪದ ಸಂಗತಿಗಳನ್ನೆ ಎತ್ತಿಕೊಂಡು ಅನ್ವಯಿಕಗೊಳಿಸುವ ಬಗೆ ಸ್ತ್ರೀವಾದಿ ಅಧ್ಯಯನಕ್ಕೆ ಹೊಸ ಆಯಾಮವನ್ನೇ ನೀಡಿದೆ.

ಸ್ತ್ರೀವಾದಿ ಅಧ್ಯಯನಕ್ಕೆ ಹೊಸ ಆಯಾಮವನ್ನೆ ನೀಡಿದೆ, ಕೆ.ಆರ್.ಸಂಧ್ಯಾರೆಡ್ಡಿ ಅವರ "ಜನಪದ ಸಾಹಿತ್ಯದಲ್ಲಿ ಮಹಿಳೆ" (೧೯೯೮) ಈ ಮಾರ್ಗದಲ್ಲಿ ನೆನೆಯಬೇಕಾದ ಚಿಕ್ಕ ಕೃತಿ. ಆದರೆ ಲಿಂಗವ್ಯವಸ್ಥೆಯಲ್ಲಿ ಹೆಣ್ಣು ಬಲಿಪಶು ಎನ್ನುವುದು ಜನಪದದ ಸತ್ಯ ಕೂಡಾ ಎನ್ನುವ ನಿಲುವಿನಲ್ಲಿ ಹೊರಾಡುವ ಸಂಧ್ಯಾರೆಡ್ಡಿಯವರು ಅದನ್ನೆ ಸಾಕ್ಷೀಕರಿಸಲು ಶಿಷ್ಟ ಪುರಾಣಗಳನ್ನಿತ್ತ ಪ್ರತಿಪಾದಿಸುತ್ತದೆ. ಅವರು ಪಾಶ್ಚಾತ್ಯ ಲಿಂಗ ಪ್ರಭೇದದ ಅಧ್ಯಯನದ ಮಾರ್ಗದರ್ಶಿಕೆಯಲ್ಲಿ ಸಾಗುವುದರಿಂದ ನಮ್ಮ ಮೌಖಿಕ ಪರಂಪರೆಯ ಸೂಕ್ಷ್ಮಗಳನ್ನು ಬಿಟ್ಟ ಪುರುಷ ರಚನೆಗಳನ್ನೆ ಹರಿದು ಹೆಣ್ಣಿನ ಚರಿತ್ರೆಯನ್ನೆ ಕಾಣುವುದು ಆಗಲಿಲ್ಲ. ಲಿಂಗ ವ್ಯವಸ್ಥೆಯಲ್ಲಿ ಹೆಣ್ಣು ಶೋಷಿತಗಳು ಎನ್ನುತ ಸರಳ ದ್ವಂದ್ವವನ್ನು ದಾಖಲಿಸುವುದು. ಸಂಸ್ಕೃತಿಯೊಂದರ ಲಿಂಗ ಪ್ರಭೇದ ಇದಕ್ಕೆ ಏನು ಎನ್ನುವುದನ್ನು ಗುರುತಿಸುವುದು ಸ್ತ್ರೀವಾದದ ಕಾಳಜಿಯಾದರೂ ನಮ್ಮ ಇಂದಿನ ಅಗತ್ಯದಲ್ಲಿ ಸ್ತ್ರೀವಾದ ಈ ಲಿಂಗ

ವ್ಯವಸ್ಥೆಯನ್ನು ಕಂಗಾಲುಗೊಳಿಸಿ ತನ್ನತನದ ಅಸ್ಮಿತೆಯನ್ನು ದಾಖಲಿಸಿದ ಹೆಣ್ಣಿನ ಚರಿತ್ರೆ ಕಟ್ಟುವ ಕೆಲಸವಾಗಬೇಕಾಗಿದೆ.

**೩. ಸ್ತ್ರೀವಾದ:**

ಸ್ತ್ರೀವಾದಕ್ಕೆ ಇಂಗ್ಲೀಷಿನಲ್ಲಿ 'ಫೆಮಿನಿಸಂ' ಎಂದು ಕರೆಯುತ್ತಾರೆ.

ಸ್ತ್ರೀವಾದವು ಇಂದು ರಾಜಕೀಯ ಸಿದ್ಧಾಂತವಾಗಿ ಬೆಳೆದಿದೆ. ಸ್ತ್ರೀಪುರುಷರ ನಡುವಿನ ಲಿಂಗಾಧಾರಿತ ತಾರತಮ್ಯಗಳನ್ನು ಹೋಗಲಾಡಿವುದೇ ಸ್ತ್ರೀವಾದದ ಉದ್ದೇಶವಾಗಿದೆ. ಹೀಗಾಗಿ ಸ್ತ್ರೀವಾದ ಎಂಬುವದು ಸ್ತ್ರೀ ಸಮಾನತೆಗಾಗಿ ನಡೆಯುವ ಹೋರಾಟವಾಗಿದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಸ್ತ್ರೀವಾದಕ್ಕೆ ದೀರ್ಘವಾದ ಪರಂಪರೆಯಿದೆ. ಜರ್ಮನಿ, ಫ್ರಾನ್ಸ, ಇಟಲಿ, ಬ್ರಿಟನ ಈ ಮೊದಲಾದ ದೇಶಗಳಲ್ಲಿ ಸ್ತ್ರೀ ಸಮಾನತೆಗಾಗಿ ಮಹಿಳೆಯರು ಹೋರಾಟ ಮಾಡುತ್ತ ಬಂದಿದ್ದಾರೆ. ಈ ದೇಶಗಳಲ್ಲಿ ಎರಡುನೂರು ವರ್ಷಗಳಷ್ಟು ಹಿಂದೆ ಸ್ತ್ರೀವಾದ ಪ್ರಾರಂಭವಾಗಿದೆ.

ಮಹಿಳೆಯರ ವಿಮೋಚನೆಯು ಸ್ತ್ರೀವಾದ ಮುಖ್ಯ ಉದ್ದೇಶವಾಗಿದೆ. ಪಾಶ್ಚಿಮಾತ್ಯ ದೇಶಗಳಲ್ಲಿ ೧೯೩೦-೧೯೭೦ ರ ದಶಕಗಳಲ್ಲಿ ನಂತರ ಹೋರಾಟಗಳನ್ನು ಮಹಿಳಾ ವಿಮೋಚನಾ ಚಳುವಳಿ ಎಂದು ಗುರುತಿಸಲಾಗುತ್ತದೆ. [Women's Liberation movement] ಸ್ತ್ರೀಯರ ಸಮಸ್ಯೆಗಳು ಕಾಲದೇಶಗಳಿಗೆ ಸಂಬಂಧಿಸಿದಂತೆ ಬೇರೆ ಬೇರೆಯಾಗಿವೆ ಪಶ್ಚಿಮ ದೇಶಗಳಲ್ಲಿ ಪಿತೃಪ್ರಧಾನ ವ್ಯವಸ್ಥೆಯಲ್ಲಿನ ಅಸಮಾನತೆ ಎದ್ದು ಕಾಣುತ್ತದೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಪುರುಷರು ತಮ್ಮ ಹಿತಾಸಕ್ತಿಗಳಿಗೆ ಅನುಕೂಲವಾಗುವ ಹಾಗೇ ವರ್ತಿಸುತ್ತಾರೆ. ಪುರುಷ ನಿಯಂತ್ರಿತ ವ್ಯವಸ್ಥೆಯಲ್ಲಿ ಸ್ತ್ರೀ ಅಬಲೆಯಾಗಿ ಕಾಣುತ್ತಾಳೆ.

ಹೆಣ್ಣು ಗಂಡಿನ ದುಡಿಮೆಗಳಿಗೆ ಎರಡು ರೀತಿಯಲ್ಲಿ ಬೆಲೆ ಕಟ್ಟುವ ಪದ್ಧತಿ ಬೆಳೆದು ಬಂದಿದೆ. ಮಹಿಳೆಯರಿಗೆ ಕಡಿಮೆ ಸಂಬಳ ಕೊಡುವದು ಹೇಳದೆ ಕೇಳದೇ ಕೆಲಸದಿಂದ ತೆಗೆದುಹಾಕುವದು ಸಹಜ ಎಂಬಂತೆ ನಡೆಯುತ್ತವೆ. ಅನಿಶ್ಚಿತತೆ, ಅಭದ್ರತೆ ತಾಯಿತನ ಮುಂತಾದ ಅನೇಕ ಸಂಗತಿಗಳು ಮಹಿಳೆಯರ ದುಡಿಮೆಯ ಹಕ್ಕುಗಳನ್ನು ಕಿತ್ತುಕೊಳ್ಳುತ್ತವೆ. ಇಂತಹ ಸ್ಥಿತಿಯಿಂದ ಬಿಡಿಸಿಕೊಳ್ಳಬೇಕಾದರೆ ಸ್ತ್ರೀ ಪುರುಷರು ಇಬ್ಬರಿಗೂ ಸಮಾನ ಅವಕಾಶ ಇರಬೇಕು ಎಂಬ ಸ್ತ್ರೀವಾದ ಪ್ರತಿಪಾದಿಸುತ್ತದೆ.

೧೮ನೇ ಶತಮಾನದ 'ಮೇರಿವ್ರಾಲ್ ಸ್ಟನ್ ಕ್ರಾಫ್ಟ್ . ೧೯ನೇ ಶತಮಾನದ ವರ್ಜೀನಿಯಾವುಲ್ಫ್ ಈ ಮೊದಲಾದ ಚಿಂತಕಿಯರ ವಿಚಾರಗಳನ್ನು ಕೂಡಿಸಿಕೊಂಡು

'ಸಿಮೋನ್ ದ ಬೋವಾ' ಎಂಬ ಚಿಂತಕಿ ಸ್ತ್ರೀವಾದದಂತಹ ಜಗತ್ತಿನ ಗಮನ ಸೆಳೆಯುತ್ತಾಳೆ. ಆಮೇಲೆ ಮೇರಿ ಎಲ್‌ಮನ್, ಕೇಟ್ ಮಿಲಟ್, ಈ ಮೊದಲಾದವರು ಸ್ತ್ರೀವಾದ ಮೊದಲ ಚಿಂತಕಿಯಾಗಿದ್ದಾರೆ.

ಈ ಮಹಿಳೆಯರು ಪಶ್ಚಿಮ ದೇಶದಲ್ಲಿ ಸ್ತ್ರೀವಾದಕ್ಕೆ ಸಂಬಂಧಿಸಿದಂತೆ ಮೊದಲ ತಳಪಾಯ ಕಟ್ಟಿದರು. ಸ್ತ್ರೀವಾದದ ಆದಿ ಚಿಂತಕಿಯರಲ್ಲಿ 'ಸಿಮೋನ್ ಬೋವಾ' ಪ್ರಸಿದ್ಧ ಲೇಖಕಿಯಾಗಿದ್ದಾರೆ. ೧೯೪೯ ರಲ್ಲಿ ಪ್ರಕಟವಾದ ಆಕೆಯ "The Second Sex" ಕೃತಿ ದೊಡ್ಡ ಚರ್ಚೆಯನ್ನೆ ಪ್ರಾರಂಭಿಸಿತು. ಸ್ತ್ರೀವಾದದ ಚಿಂತನೆಯನ್ನು ಗಾಢವಾಗಿ ಪ್ರಭಾವಿಸಿದ ಕೃತಿ ಇದಾಗಿದೆ. ಈಗೆ ಸ್ತ್ರೀ ಶೋಷಣೆಗೆ ಒಂದು ತಾತ್ವಿಕ ಚೌಕಟ್ಟನ್ನು ಕೊಟ್ಟಿದ್ದಾಳೆ. ಜ್ಯಾಗರ್ ಅವರು ಸ್ತ್ರೀಯರು ತನ್ನ ದೇಹದಿಂದ ಪ್ರತ್ಯೇಕಿಸಲ್ಪಟ್ಟ ಭಾವನೆಯನ್ನೇ ಅನುಭವಿಸುತ್ತಾರೆ.

ತನ್ನ ದೇಹ ಯಾತಕ್ಕಾಗಿ ಯಾರಿಂದ ಹಾಗೂ ಹೇಗೆ ಬಳಸಲ್ಪಡಬೇಕು, ಎಂದು ನಿರ್ಧರಿಸುವಲ್ಲಿ ಆಕೆಗೆ ಸ್ವಾತಂತ್ರ್ಯತೆ ಇಲ್ಲವೆಂದು ಪ್ರತಿಪಾದಿಸಿದ್ದಾರೆ. ಕ್ರಿಸ್ಟೇವಾ ಅವರು ಒಂದು ಮಗು ಸಾಂಕೇತಿಕ ರಚನೆಯನ್ನು ಪ್ರವೇಶಿಸಿದ ನಂತರ ತನ್ನನ್ನು ತಾಯಿ ಅಥವಾ ತಂದೆಯೊಡನೆ ಗುರುತಿಸಿಕೊಳ್ಳುವ ಸ್ವಾತಂತ್ರ್ಯವನ್ನು ಪಡೆಯಬೇಕು. ಗಂಡು ಮಾತ್ರ ಹೆಣ್ಣು ಮಕ್ಕಳಬ್ಬರಿಗೂ ಸಮಾನ ಸಂಸ್ಕೃತಿಕ ಆಯ್ಕೆಗಳನ್ನು ಒದಗಿಸಿದಾಗ ಗಂಡು ಮಗು ತನ್ನ ತಾಯಿಯನ್ನೆ ಅನುಸರಿಸಬಹುದು ಅಥವಾ ಹೆಣ್ಣು ಮಗು ತನ್ನ ತಂದೆಯೊಂದಿಗೆ ತನ್ನನ್ನು ಗುರುತಿಸಿಕೊಳ್ಳಬಹುದು ಎಂದಿದ್ದಾನೆ. ಹೀಗೆ ಸ್ತ್ರೀವಾದದ ಪರಿಕಲ್ಪನೆ ಪಾಶ್ಚಾತ್ಯ ಹಾಗೂ ಭಾರತೀಯ ಸಂಸ್ಕೃತಿ ಹಾಗೂ ಸಾಹಿತ್ಯದಲ್ಲಿ ನೆಲೆ ನಿಲ್ಲುತ್ತದೆ.

ಇಲ್ಲಿಯ ಜನಪದ ಬಹುಮುಖಿ ಬೆಲೆಯನ್ನೆ ಅಭಿಪ್ರಾಯಗೊಳಸುತ್ತದೆ. ಸಣ್ಣ ಸಣ್ಣ ಗುಂಪುಗಳ ಬಳಗೆ ಸಂಸ್ಕೃತಿಕವಾದ ರೂಪದಲ್ಲಿ ನಡೆಯುವ ಕಲಂಕ ಹಾಗೂ ಪರಾಂಪರಾನುಗತವಾಗಿ ಮೂಡಿ ಬಂದಿದೆ. ಮುಖ್ಯವಾದ ಸಂವಹನವನ್ನು ನಾವು ಜನಪದ ಎಂದು ಕರೆಯಬಹುದಾಗಿದೆ. ಜನಪದ ಕೂಡ ಒಂದು ಸಂಸ್ಕೃತಿಯಂತೆ ಪ್ರತಿಪಾದನೆಗೊಂಡಿದೆ. ಜಾತಿ, ಜನ, ವರ್ಗಗಳ ಆಚೆ ಮನುಷ್ಯ ಸಮುದಾಯದ ಚಿತ್ರಣವನ್ನು ಪ್ರತಿಪಾದಿಸುತ್ತದೆ. ಜನಪದ ಎಂಬುವುದು ಅದನ್ನೆ ಒಂದು ಅಂತರ ಶಿಸ್ತಿನ ಅಧ್ಯಯನವಾಗಿ ನಿರೂಪಿಸಲಾಗಿದೆ. ಹಲವಾರು ತತ್ವ ಸಿದ್ಧಾಂತಗಳ ನೆಲೆಗಳಲ್ಲಿ ವಿಶ್ಲೇಷಣೆ ಅಧ್ಯಯನಗಳನ್ನು ಬಳಸಲಾಗುತ್ತಿದೆ.

ಇಂದು ಜಾನಪದವನ್ನು ಬಹುಮುಖಿ ನೆಲೆಗಳಲ್ಲಿ ಕಾಣಲಾಗುತ್ತಿದೆ. ಈ ಕಾರಣದಿಂದಾಗಿಯೇ ತನ್ನ ಮುಖ್ಯ ಗುಣ ಹಾಗೂ ಸಫಲತೆಯ ಅದು ಬೀರುವಂತೆ ಮಾಡಿದೆ. ಜಾನಪದ ವೈಜ್ಞಾನಿಕ, ತೌಲನಿಕ ಅಂತರಶಿಸ್ತು ಹಾಗೂ ಸಂಸ್ಕೃತಿಕ ಸಂಕಥನದ ಸ್ವರೂಪವಾಗಿ ಬೆಳೆದು ಬರುತ್ತದೆ. ಇದನ್ನೆ ಬಹುಮುಖ ನೆಲೆಗಳಲ್ಲಿ ನೋಡಿದಂತೆ ಜಾನಪದರು ಲಿಂಗಪ್ರಭೇದದ ನೆಲೆಗಳಲ್ಲಿ ಹೊಸ ರೀತಿಯ ಹಾಗೂ ಕಲ್ಪನೆಗಳಿಂದ ವಿಶೇಷವಾದ ಅಧ್ಯಯನಕ್ಕೆ ತೊಡಗುವ ಕ್ರಿಯೆಯೇ ಸ್ತ್ರೀವಾದಿ ಜನಪದವಾಗಿ ಇಂದು ಪಾಶ್ಚಾತ್ಯ-ಭಾರತೀಯ ಕರ್ನಾಟಕ ಮಟ್ಟದಲ್ಲಿ ಒಂದು ವಿನೂತನ ನೆಲೆ ಕಂಡುಕೊಳ್ಳುತ್ತದೆ.

ಜಾನಪದ ವಿದ್ವಾಂಸರಾದ ಅನೇಕರು ಬೇರೆ ಬೇರೆ ಮಗ್ಗುಲಗಳಲ್ಲಿ ಅಧ್ಯಯನ ಮಾಡುವಂತೆ ಇವತ್ತು ಲಿಂಗ ಹಾಗೂ ಲಿಂಗ ಪ್ರಭೇದಗಳ ಕುರಿತು ಸಂದರ್ಭ ಕಲ್ಪಿಸುವ ವಿಚಾರಗಳನ್ನು ನೋಡಬೇಕಾದದ್ದು ಅತ್ಯಂತ ಅವಶ್ಯವಾಗಿದೆ. ಜನಪದವು ಕೂಡಾ ಲಿಂಗ ಪ್ರಭೇದತನ ಕುರಿತು ಹೊಸ ಕಲ್ಪನೆ ಹೇಳುತ್ತದೆ. ಇವುಗಳನ್ನೆ ಅರಿತು ಸ್ತ್ರೀವಾದಿ ಅಧ್ಯಯನ ಹಾಗೂ ತಿಳುವಳಿಕೆ ಅತ್ಯಂತ ಅವಶ್ಯವಾಗಿದೆ. ಜನಪದ ವಿದ್ವಾಂಸರು ಸ್ತ್ರೀವಾದಿ ಸಾಹಿತ್ಯದ ನಿರ್ಮಾಪಕರು ಮತ್ತು ನಿರೂಪಕರು ಹೆಚ್ಚಾಗಿ ಮಹಿಳೆಯರೆ ಆಗಿದ್ದಾರೆ.

ಮಹಿಳಾ ಪರಂಪರೆಯನ್ನೆ ದಾಖಲಿಸಿದ್ದಾರೆ. ಶಿಷ್ಟವನ್ನೆ ಮಹಿಳೆಯು ಸಮರ್ಥವಾಗಿ ನಿರೂಪಿಸಿದಂತೆ ವಾಸ್ತವಾಗಿ ಜನಪದ ಪ್ರಕಾರಗಳಲ್ಲಿ ಅಭಿವ್ಯಕ್ತಿಯನ್ನು ದಾಖಲಿಸಲಾಗಿದೆ.

ಸ್ತ್ರೀ ಸಂವೇದನೆ ಮತ್ತು ಸಂಸ್ಕೃತಿಯು ಮಹಿಳಾ ಮುಖಗಳನ್ನು ಕುರಿತು ಅಧ್ಯಯನ ಮಾಡಲಾಗುತ್ತದೆ. ಮಹಿಳೆಯರ ಜಾನಪದವು ಬಹು ವಿಶಿಷ್ಟ ನೆಲೆಗಳಲ್ಲಿ ಲೋಕದೃಷ್ಟಿ ಹಾಗೂ ತಿಳುವಳಿಕೆಗಳು ಕೊಡುವ ಲಿಂಗ ಭೇದ ಹಾಗೂ ಸ್ತ್ರೀವಾದಿ ಚಿಂತನೆ ಆಸಕ್ತರಾಗಿದ್ದಾರೆ. ಮಹಿಳಾ ಜನಪದವನ್ನು ಅನಾವರಣಗೊಳಿಸಲಾಗುತ್ತದೆ. ಈ ಹಿನ್ನಲೆಯಲ್ಲಿ ಮಹಿಳಾ ಜನಪದ ಅಧ್ಯಯನವು ಎಂದೆಲ್ಲಾ ಆಗಿದೆ. ಎ.ಕೆ.ರಾಮಾನುಜಾರ್ಯ, ವಿವೇಕ ರೈ, ಗಾಯತ್ರಿನವಾಡ, ಸಂಧ್ಯಾರೆಡ್ಡಿ, ಮುಂತಾದ ಮಹಿಳಾ ಹಾಗೂ ಲೇಖಕರು ಜನಪದ ಕುರಿತು ಅಧ್ಯಯನ ಮಾಡಿದ್ದಾರೆ. ದಾಂಪತ್ಯ ಹಾಗೂ ಜೀವನದರ್ಶನವನ್ನು ಕೂಡ ಬರೆಯಲಾಗಿದ್ದು ಗಮನಿಸಬೇಕಾಗಿದೆ.

ಸ್ತ್ರೀವಾದಿ ಜನಪದ ಅಧ್ಯಯನದಲ್ಲಿ ಮಹಿಳೆಯರ ಚಿತ್ರಣ ಕೊಡಲಾಗುತ್ತಿದೆ. ಲಿಂಗ ಪ್ರಭೇದ ಆಧಾರಿತ ಜಾನಪದ ಪ್ರಕಾರಗಳು ಉತ್ಪಾದಿಸುವ ಹಾಗೂ ಪ್ರದರ್ಶನಕಾರರಾಗಿ

ಮಹಿಳೆಯರು ನೆಲೆ ನಿಂತಿರುವುದು ಗಮನಿಸಬೇಕಾಗಿದೆ. ಇದರಲ್ಲಿ ಮನುಷ್ಯ ಕೇಂದ್ರೀತ ಜನಪದರು ಹೆಣ್ಣು-ಗಂಡನ್ನು ಪ್ರತಿಪಾದಿಸುವ ಸಂಬಂಧಗಳು ವಿಶಿಷ್ಟವಾಗಿವೆ.

ಕತೆ. ಗೀತೆ. ಗಾದೆ. ಒಗಟು ಒಡಪುಗಳು ಸಮಗ್ರವಾಗಿ ಅಭಿವ್ಯಕ್ತಗೊಂಡಿವೆ. ಜನಪದ ಸಾಹಿತ್ಯ ಸಂಗ್ರಹಗಳು ಇಲ್ಲಿ ದಾಖಲಾಗಿವೆ. ಲಿಂಗ ವ್ಯವಸ್ಥೆ ಆಧಾರಿತ ಜನಪದರತೆಗಳು ಇಲ್ಲಿ ಸಾಕಷ್ಟು ದೊರಕುತ್ತವೆ. ಗಂಡು ಹೆಣ್ಣಿನ ಪರಿಕಲ್ಪನೆ ಹಾಗೂ ಸ್ತ್ರೀವಾದಿ ನೆಲೆಗಳಲ್ಲಿ ಅಧ್ಯಯನ ಕಂಡು ಬರುತ್ತವೆ. ಪೊರಕೆ. ಸೇರು. ಪಾವುಗಳು ಸಹ ಮಹಿಳೆಯೊಂದಿಗೆ ದಾಖಲಿಸಿದ್ದಾರೆ. ಒಂದು ಅಜ್ಜಿ ಊರಲ್ಲಿ ಸತ್ತದೆ. ಮೂಲೆಯಲ್ಲಿ ಕೂತಿದೆ [ಪೊರಕೆ] ತಂಗಿ ಅಕ್ಕನ ಮನೆಗೆ ಹೋಗುತ್ತಾಳೆ. ಅಕ್ಕ ತಂಗಿ ಮನೆಗೆ ಹೋಗುವುದಿಲ್ಲ- (ಸೇರು-ಪಾವು)

ಲಿಂಗಭೇದ ಅಧ್ಯಯನಗಳು ಶೋಷಣೆ ಕೇಂದ್ರದಲ್ಲಿ ಕಾಣಸಿಗುತ್ತವೆ. ಗಂಡನ್ನು ಬಯ್ಯುವ ಸಂದರ್ಭದಲ್ಲಿ ಮಹಿಳಾ ಮೂಲಕ ವ್ಯಕ್ತಗೊಂಡಿದೆ.

ನಿನ್ನ ಹೆಂಡತಿ ರಂಡೆಯಾಗಲಿ
ನಿನ್ನ ಹೆಂಡತಿ ತಾಳಿಕಳಿಯ
ಮುಂಡೇ ಮಗ
ಮಹಿಳಾ ರೂಪಗಳು ಇಲ್ಲಿವೆ.

ಗಂಡನ ಅಧಿಕಾರ-ಪ್ರವೃತ್ತಿ ವೃತ್ತಿಗಳು ಸದಾ ಇರುವ ಗಂಡು ತನ್ನ ಸ್ವಾರ್ಥದ ಸಲುವಾಗಿ ನಿರಂತರ ಉಳಿಸಿಕೊಳ್ಳಲು ಪ್ರಯತ್ನಿಸುತ್ತಲೇ ಇರುತ್ತಾನೆ. ಗಾದೆಗಳು ಸಾಮಾಜಿಕ ಜೀವನದ ಬಹುಮುಖವಾದ ಮಾರ್ಗ ಜೋಡಿಸುವ ವಾಹಕಗಳು ಪುರುಷ ಅಧಿಕಾರದ ಸ್ವಾರ್ಥತೆಗೆ ಹಗಲಿರುಳು ದುಡಿಯುತ್ತಾನೆ. ಇಂತಹ ಮಾತುಗಳ ಪ್ರತಿಪಾದನೆ ಹೀಗೆ

ಹೆಣ್ಣಿನ ಬುದ್ಧಿ ಮೊಣಕಾಲ ಕೆಳಗೆ
ಗಂಡು ಕೂತು ಕೆಟ್ಟ ಹೆಣ್ಣು ತಿರುಗಿ ಕೆಟ್ಟಳು.
ಕಪ್ಪೆ ಸೊಕ್ಕಿದರೆ ಹಳ್ಳದಲ್ಲಿ ನಿಲ್ಲದು
ಹೆಣ್ಣು ಸೊಕ್ಕಿದರೆ ಮನೆಯಲ್ಲಿ ನಿಲ್ಲದು.

ಮಜ್ಜಿಗೆಯಲ್ಲಿದ್ದ ಬೆಣ್ಣೆ ಕೆಡುವುದಿಲ್ಲ.

ಅಂಜಿಕೆಯಿದ್ದ ಹೆಣ್ಣು ಕೆಡುವುದಿಲ್ಲ
ಗಂಡು ನೋಡಿಕೊಡಬೇಕು, ಮರ ನೋಡಿ ಬಳ್ಳಿ ನೆಡಬೇಕು.

ಇಂತಹ ಗಾದೆ ಲಿಂಗ ಪ್ರಭೇದದಲ್ಲಿ ಒಡೆದು ಹೋದ ಗಂಡು ಹೆಣ್ಣಿನ ಜಗತ್ತನ್ನು ತಿಳಿಸುತ್ತದೆ. ಅಲ್ಲದೆ ಗಂಡಿನ ರಕ್ಷಣೆಯನ್ನುಂಟು ಮಾಡುತ್ತದೆ. ಮಹಿಳೆ ಗಂಡು ಹೇಗೆ ಜನಪದ ಅಧ್ಯಯನಕ್ಕೆ ಒಳಪಡಿಸುತ್ತದೆಂಬುದನ್ನೆ ಅರಿಯುತ್ತೇವೆ. ಹಾಗೆ ಅವನನ್ನು ಹೇಗೆ ನೋಡಬೇಕೆಂಬುವುದನ್ನು ಸ್ತ್ರೀವಾದ ಚಿಂತಿಸುತ್ತದೆ. ಮಹಿಳಾ ಜನಪದವು ಸಹಿತ ಪುರುಷನಿಗಿಂತ ಭಿನ್ನವಾಗಿಯೇ ಅಧ್ಯಯನ ಮಾಡುತ್ತಿದೆಯೇ ಅಥವಾ ಅವರಿಗಿಂತ ಹೇಗೆ ಪರಸ್ಪರ ಪೂರಕ ಭಿನ್ನವೆಂಬುವುದನ್ನು ಗಂಭೀರವಾಗಿ ಅಧ್ಯಯನ ಮಾಡುವುದಾಗಿದೆ. ಜನಪದವನ್ನು ಭಾಷಿಕ, ಶೈಲಿಕ, ಕಾಯಕ ಸಂದರ್ಭದ ವಸ್ತು ಪರಿಕರ ನಿರೂಪಣೆಗಳು ಹೇಗೆ ಎನ್ನುವ ಚರ್ಚೆಯನ್ನು ಕೂಡ ಮಾಡುವುದು ಸ್ತ್ರೀವಾದಿಗಳ ಮುಖ್ಯ ಕಾಳಜಿಯಾಗಿದೆ. ಸ್ತ್ರೀವಾದಿ ಜನಪದವನ್ನು ಸಂಪನ್ನತೆಯಿಂದ ಚಿತ್ರಿಸಬಲ್ಲಳು ಬದಲಾಗಿ ಜೀವನ ಮತ್ತು ಜಗತ್ತು ಹೇಗೆ ಪುರುಷರಿಗಿಂತ ಭಿನ್ನ ಆಲೋಚನೆಯಲ್ಲಿ ನಡೆದಿದೆ ಎಂದು ಹೇಳುವುದಾಗಿದೆ.

ಸೃಜನಶೀಲ ಕ್ರಿಯೆಗೆ ಹೇಗೆ ಮಹಿಳೆ ಸ್ಪಂದಿಸುತ್ತಾಳೆಂಬುವುದಾಗಲಿ ವಿಮರ್ಶಿಸಲಾಗುತ್ತದೆ. ಇಲ್ಲಿ ಪುರುಷರಿಗಿಂತ ಮಹಿಳೆಯರು ಕಡಿಮೆ ಅವರು ಜನಪದವನ್ನು ಕೂಡ ನಾವು ಅಲಕ್ಷಿಸಿದ್ದೇವೆ. ಪುರುಷರ ರೀತಿಯಲ್ಲಿಯೇ ಮಹಿಳೆಯ ಜನಪದ ಕಲಾವಿದರನ್ನು ನೋಡಲಾಗಿದೆ. ಪುರುಷನ ರೀತಿ ಪ್ರತಿಭೆ ಚಾಣಾಕ್ಷಕ್ಕಿಂತ ಮಹಿಳೆಯರ ಚಿತ್ರಣ ಕಡಿಮೆ ಎಂದು ಭಾವಿಸಲಾಗುತ್ತಿದೆ.

ಜೋಗುಳ ಹಾಡುಗಳು ಎಲ್ಲಾ ಹಾಡಿಗಿಂತ ಕೀಳೆಂದು ಹೇಳಲಾಗುತ್ತಿದೆ. ಏಕೆಂದರೆ ಮಹಿಳೆ ಹಾಡಿನ ಹಾಡುಗಳಾದ್ದರಿಂದ ಅವನ್ನ ಸ್ಪಷ್ಟವಾಗಿ ಅಧ್ಯಯನಕಾರರು ಬೇರೆ ಬೇರೆ ನೆಲೆಗಳಲ್ಲಿ ಹೇಳುತ್ತಾರೆ. ಅವುಗಳ ಗ್ರಹಿಕೆಗೆ ಹೆಚ್ಚಿನ ಮಹತ್ವಕೊಟ್ಟಿಲ್ಲ ಇದೂವರೆಗೂ ಮಹಿಳಾ ಜನಾಂಗವನ್ನು ನಿರ್ಲಕ್ಷಿಸಿದ್ದಾರೆ. ಆದ್ದರಿಂದ ತೀವ್ರವಾಗಿ ಮಹಿಳಾ ಜನಾಂಗದ ಪ್ರಕಾರಗಳನ್ನು ಕಾಣಬಹುದು. ಮಹಿಳಾ ಜನಪದ ಕಲಾಕಾರರ ಬದುಕನ್ನಂತು ದಾಖಲಿಸುವ ಸಂಗ್ರಹಿಸುವ ಹಾಗೂ ಸಂಶೋದನ ಕೆಲಸ ಬರಬೇಕಾಗಿದೆ. ಮಹಿಳಾ ಜನಪದವು ಮುಖ್ಯವಾದರೂ ಲೋಕದೃಷ್ಟಿಗೆ ಒಳಪಟ್ಟದ್ದಾಗಿದೆ. ಅಥವಾ ವಿರುದ್ಧವಾದ ನೆಲೆಗಳಲ್ಲಿ ಕೂಡಿಕೊಂಡು ಬಂದಿದೆ ಎಂಬುದನ್ನು ವಿಶೇಷವಾಗಿ ಗಮನಿಸಬೇಕಾಗಿದೆ.

ಸಿರಿಪಾದನ ಮಹಾಕಾವ್ಯಗಳಲ್ಲಿದ್ದ ಪ್ರಮುಖ ಘಟನೆಗಳನ್ನು ಆಧರಿಸಿ ಹೇಳುವುದಾದರೆ ಇಲ್ಲಿ ಪುರುಷನ ಸ್ವೇಚ್ಛಾಚಾರದ ಪ್ರವೃತ್ತಿ ಆಗ ಮನೆಯಲ್ಲಿ ಪುರುಷ ಅಧಿಕಾರ ಹಕ್ಕು ಅಧಿಕಾರದ ಪ್ರಶ್ನೆ ಸಮಸ್ಯೆ. ಸವಾಲುಗಳು. ಘರ್ಷಣೆ. ವಿಚ್ಚೇದನ ಕೊಡುವ ಹೆಣ್ಣು ಮದುವೆಗೆ ಅಂಗ ಪ್ರಭೇದದಲ್ಲಿ ನೆಲೆಗಳು ಹೇಗೆ ಸಹಕಾರಿಯಾಗಿವೆ ಎಂಬುದನ್ನು ಪ್ರಸ್ತುತವಾಗಿ ವಿವರಿಸುತ್ತಾರೆ. ಇಲ್ಲಿ ನಾವು ಗಮನಿಸಬೇಕಾದದ್ದು ಎಂದರೆ ಅಂಗಾನುತೆ ವಸ್ತು ಪಂಗಡಗಳನ್ನು ಕುರಿತು ನಿಯಂತ್ರಿಸುವುದಾಗಿದೆ. ಜನಪದದಲ್ಲಿ ಮಹಿಳೆಯ ಕುರಿತು ಅನ್ಯೋನ್ಯತೆ ಹಾಗೂ ಅಂತರಂಗ ಸಹಿತ ಶೋಧವು ಕೂಡಾ ನಡೆಯುತ್ತದೆ. ಸ್ತ್ರೀವಾದದ ಮುಖ್ಯ ಲಕ್ಷಣ ಮಹಿಳಾ ಪ್ರಕಾರ ಹಾಗೂ ಮಹಿಳಾ ತತ್ವದ ಶಕ್ತಿಯನ್ನು ಕುರಿತು ಅಧ್ಯಯನ ಹಾಗೂ ಚಿಂತನೆಗೆ ಹೆಚ್ಚಿನ ಮಹತ್ವ ನೀಡುತ್ತಿದ್ದಾನೆ.

**ನಿರ್ವಹಣೆಗಳ ಮಾಡುವುದಿಲ್ಲ, ಇಲ್ಲಿಯ ಮಹಿಳಾ ಜನಪದ ವಿಶಿಷ್ಟವಾದ ಲಕ್ಷಣವಾಗಿದೆ.**

ಪುರಾಣಗಳನ್ನು ಸಹಿತ ನೋಡುತ್ತಾ ವಾಸ್ತವದ ಜೀವನದಲ್ಲಿ ಮಹಿಳೆ ಹೇಗೆ ತನ್ನ ರೂಪವನ್ನು ಪಡೆಯುತ್ತಾಳೆಂಬುವುದನ್ನು ನಿರೂಪಿಸುವುದಾಗಿದೆ. ಮಹಿಳಾ ಜನಪದ ಸಾಧ್ಯವಾಗದ ರೀತಿಗಳನ್ನು ಇಲ್ಲಿ ದಾಖಲಿಸುವ ಕ್ರಿಯೆ ಮಹಿಳಾ ಜನಪದ ಮಾಡುತ್ತದೆ. ಜನಪದ ಕಥೆಗಳು ಸಹ ಮಹಿಳಾ ಆಧಾರಿತವಾದವುಗಳು ವಸ್ತು ಸಹಿತ ಪ್ರಧಾನವಾಗಿ ಮಹಿಳಾ ಸುತ್ತ ಹೆಣೆದುಕೊಂಡಿದೆ. ಅಜ್ಜಿಕತೆಯಿಂದ ಹಿಡಿದು ಪ್ರತಿಯೊಂದು ಹೆಣ್ಣಿನ ಸತ್ಯದ ಕಡೆ ಹೆಣೆಯಲಾಗಿದೆ.

ಸ್ತ್ರೀಕೇಂದ್ರಿಕೃತವಾಗಿದೆ, ಒಂದಾನೊಂದು ಊರಿನಲ್ಲಿ ಒಂದು ಅಜ್ಜಿ ಎಂಬ ರೀತಿಯ ಪ್ರಾರಂಭವಾಗುವ ಕತೆಗಳಿಗೆ ಲೆಕ್ಕವೆ ಇಲ್ಲ. ಅತ್ಯಂತ ದೊಡ್ಡ ಪ್ರಮಾಣದಲ್ಲಿ ಕತೆಗಳು ಬಂದಿವೆ. ಜನಪದ ಕತೆಗಳಲ್ಲಿ ಮಹಿಳಾ ಕ್ರೀಯಾಶೀಲ. ಕ್ರೀಯಾಚಾಲನೆ ಶಕ್ತಿ ಹೊಂದಿದ್ದು. ಪುರುಷನ ಕಾರ್ಯಸಾಧನೆಯ ಹಿಂದೆ ಸಂಪೂರ್ಣವಾಗಿ ಮಹಿಳೆ ಇರುವುದು ಕಂಡುಬರುತ್ತದೆ. ಜಾನಪದ ಕತೆಗಳಲ್ಲಿ ಅಜ್ಜಿ ಮನೆ ಬರುತ್ತದೆ ವಿನಃ ಪುರುಷ ಪ್ರಧಾನ ಹೆಸರುಗಳು ದಾಖಲಾಗಿಲ್ಲ. ಕತೆಯಲ್ಲಿ ನಾವು ಹೆಣ್ಣನ್ನು ನಿರ್ಲಕ್ಷಿಸಿದರೆ ನಾಯಕನ ಪಾತ್ರ ಅತ್ಯಂತ ಕಳೆ ಹೀನವಾಗಿ ಕಂಡುಬರುತ್ತದೆ. ಅಂದರೆ ಮಹಿಳೆ ಕತೆಗೆ ಹೀಗೆ ಪೂರಕವಾಗಿ ರಚನೆಗೊಂಡಿದ್ದಾಳೆಂಬುವುದು ಅಲ್ಲಿನ ವಿಶಿಷ್ಟವಾಗಿದೆ.

ಜನಪದ ಕತೆಗಳು ತಮಗೆ ತಿರಸ್ಕಾರವಾದ ಬೇಕಾದುದನ್ನೆ ರಾಕ್ಷಸ ಆಗಲಿ ಖಳನಾಯಕ ಪ್ರತಿನಾಯಕನಾಗಲಿ ಅವನು ಸಂಪೂರ್ಣವಾಗಿ ನಿಲ್ಲಿಸಿ ಅವನನ್ನೇ

ಭೇದಗೊಳಸಿದ್ದಲ್ಲದೇ ನಿರಾಕರಿಸುವ ಗುಣ ಇಲ್ಲಿ ಕಾಣುತ್ತೇವೆ. ಈ ಕಾರಣದಿಂದ ಇಲ್ಲಿ ಎಲ್ಲಾ ರೀತಿ ನೀತಿಗಳು ಹೊರಹಾಕಿದ ಮಹಿಳಾ ಪ್ರಯತ್ನ ಕಾಣುತ್ತೇವೆ. ಹಾಸ್ಯ ಕತೆಗಳು ಪೆದ್ದನಂಜ ಎಂದು ಹೇಳುವಾಗ ಪೆದ್ದುಗುಂಡಿ ಎಂದು ಮಹಿಳೆಗೆ ಕರೆದಿಲ್ಲ. ಅದನ್ನು ಮಹಿಳೆಯೂ ನಿಜಮಾಡಲಲ್ಲ ಎಂಬ ಸವಾಲು ಕೂಡ ಮುಂದಿದೆ. ಮಹಿಳಾ ಬೌದ್ಧಿಕ ಶಕ್ತಿ ಹೇಗೆ ವೃದ್ಧಿಯಾಗಿದೆ ಎಂಬುದನ್ನು ಸಾರಾಸಗಟಾಗಿ ಚಿತ್ರಿತವಾಗುತ್ತದೆ. ಪುರುಷ ಪರವಾದ ಚಿಂತನೆಗಳು ಅವನ್ನು ನಿರಾಕರಿಸುವ ರೀತಿ ಅವನ ನಿಲುವುಗಳನ್ನು ಪ್ರಶ್ನಿಸುವ ಅಲ್ಲಿಗೆ ನಿಲ್ಲಿಸುವ ಕಾರ್ಯಗಟ್ಟಿಯಾಗಿ ನಡೆದಿದೆ.

ಇಲ್ಲಿ ಮಹಿಲೆಗೆ ಶಕ್ತಿ ಕೊಡುಗೆಯಾಗಿದೆ. ಪುರುಷನಿಗೆ ಜೀವ ಕೊಡುವ ಜೀವಿಸುವಂತೆ ಆರೈಕೆ ಮಾಡುವ ಮಹಿಳೆ ಅಲ್ಲದೇ ಪ್ರಾಣರೂಪಿತ ಅಥವಾ ಬೇರೆ ಆಕಾರಗಳಲ್ಲಿ ಪಡೆದುಕೊಂಡ ಮಹಿಳೆ ತನ್ನ ಕಡೆ ಗಂಡನಾಗಬೇಕೆಂಬ ಆಸೆಯಿಂದ ಅವನ್ನು ಬದುಕಿಸುವ ರೀತಿಯು ಕೂಡ ಗಮನಿಸುವುದ್ದಾಗಿದೆ. ಗಂಡನನ್ನು ಪರೀಕ್ಷಿಸಿ ಮತ್ತೆ ಮನುಷ್ಯಜೀವ ಕೊಡುವ ವಿಶೇಷವಾದ ಗಮನ ಕೊಡಲಾಗಿದೆ. ಹೂ. ಗಿಡ. ಬಳ್ಳಿ ತಾನು ಏನೆಲ್ಲಾ ಆದ ಮಹಿಳೆ ತನ್ನ ಅನೇಕ ರೂಪಗಳನ್ನು ಬದಲಿಸುತ್ತಾ ಬಂದಿದ್ದಾಳೆ. ಮಹಿಳೆ ಪರ ಚೈತನ್ಯ ಜೀವನರೂಪಿಸಿಕೊಂಡು ಹೇಳುತ್ತಾಳೆ.

ಜನಪದ ಕಥೆ, ಗೀತೆಗಳು ಹೆಣ್ಣಿನ ವ್ಯಕ್ತಿತ್ವ ಹಾಗೂ ಶೀಲ ಪಾಲಿತ್ಯಕ್ಕೆ ಹೆಚ್ಚಿನ ಗಮನಕೊಟ್ಟು ಅಲ್ಲಿ ದಾಖಲಿಸುವುದು ಮುಖ್ಯವಾಗಿದೆ. ಮಹಿಳೆ ತನ್ನ ಹಾದರದ ಜೋಡಿಗಳನ್ನು ಮೃದು ಮುಖ ನೆಲೆಗಳಿಂದ ಗ್ರಹಿಸಲಾಗಲಿಲ್ಲ. ಅವುಗಳನ್ನೆ ಶೀಷ್ಟವಾಗುವ ನೀತಿ, ಪತಿವ್ರತೆಯಾಗಿ ಹೇಗೆ ಹೊರಬಂದಳು ದಿವ್ಯವಾದ ಗೆಲುವು ಸಾಧಿಸುತ್ತಾಳೆಂಬುವುದನ್ನು ಗಂಭೀರವಾದ ಆಲೋಚನೆ ಚಿಂತನೆಗಳಿಂದ ಹೊರಹಾಕಲಾಗಿದೆ. ಜನಪದ ಕಥೆಗಳಲ್ಲಿ ಹೆಣ್ಣು ತನ್ನ ಪಾವಿತ್ರ್ಯತೆ ಮೀರುತ್ತಲೇ ಗೆಲುವು ಸಾಧಿಸುತ್ತಾಳೆ.

ಸೀತೆ, ಸಾವಿತ್ರಿ, ದ್ರೌಪದಿ. ಮಹಿಳಾ ಪಾತ್ರಗಳು ಇಲ್ಲಿ ದಾಖಲಾಗಿವೆ. ಅವನ್ನು ಮಹಿಳಾ ರೀತಿಗಳಲ್ಲಿ ನೋಡಲಾಗಿದೆ. ಅಲ್ಲದೆ ಮಹಿಳೆಯಾಗಿ ಹೀಗೆ ಕತೆಗಳಲ್ಲಿ ಪ್ರೀತಿ ಹಾಗೂ ಸಂಬಂಧಗಳನ್ನು ಈ ಪಾತ್ರಗಲು ಮಾಡಿದ್ದವೆಂಬುವುದನ್ನು ದಾಖಲೆಯಾಗಿ ನಿರೂಪಿಸಿವೆ. ಕತೆಗಳಲ್ಲಿ ಸಹಜವಾಗಿ ಮಹಿಳೆ ತನ್ನ ಅಂತಸತ್ವವನ್ನು ಎತ್ತಿ ಹಿಡಿದಿದ್ದಾಳೆ. ಗಂಡಿನ ನೇರ ಪ್ರತಿಭಟನೆಯನನು ಸತತವಾಗಿ ಪ್ರತಿ ಹಂತದಲ್ಲಿ ಸಹಿತ ಮಹಿಳೆ ಪುರುಷನಲ್ಲಿ ತರಾಟೆಗೆ ತೆಗೆದುಕೊಂಡಿದ್ದಾಳೆ. ಪುರುಷನ ಮೋಸತನ. ಕ್ರೌರ್ಯ.

ದುಷ್ಟತನವನ್ನು ಹೇಳುತ್ತ ಪ್ರಾಣಿಗಳ ಸಂಕೇತ ನೀತಿ ದಾಖಲಿಸುವ ವಿಶಿಷ್ಟ ರೂಪಕಗಳನ್ನು ಕೊಡುತ್ತಾಳೆ. ಪುರುಷ ಪ್ರಾಧಾನ್ಯತೆ ಹಾಗೂ ರಾಜ್ಯ ಪ್ರಭುತ್ವವನ್ನು ಸಹ ಪ್ರಶ್ನಿಸುವ ಹಾಗೂ ಕೂಡಿಸುವ ಕಾರ್ಯ ಬಹು ವಿಶಿಷ್ಟವಾಗಿ ಮಾಡಿವೆ. ಅವುಗಳನ್ನು ಪುರ್ಲೆ ಹಕ್ಕಿಯ ಒಂದು ಸಂಕೇತ ಕೊಡುವ ಮೂಲಕ ಮಹಿಳಾ ಸ್ವಾಭಿಮಾನ ಹಾಗೂ ಪುರುಷನ ಅನ್ಯಾಯಕ್ಕೆ ಮಾಡುವ ಪ್ರತಿಭಟನೆಗಳ ಸಾಂಕೇತಿಕವಾಗಿ ಪಾತ್ರಗಳು ಒಡಮೂಡಿವೆ.

ಜನಪದ ಆಟಗಳು ಸಹಿತ ಮಹಿಳಾ ಕೇಂದ್ರಿತವಾದ ನೆಲೆಗಳಲ್ಲಿ ನಡೆಯುವುವಂತವುಗಳಾಗಿವೆ. ಮಹಿಳೆ ಪುರುಷ ಎಂಬ ಜಗತ್ತನ್ನು ಅದು ಪ್ರತಿಭಟಿಸಿ ಅದು ಹೇಳುವುದಾಗಿದೆ. ಅಜ್ಜಿಯೇ ಈ ಆಟಗಳಲ್ಲಿ ಸೇರಿಕೊಂಡು ಆಟಗಳು ಹಾಗೂ ಮಹಿಳಾ ಅಭಿವ್ಯಕ್ತಿ ಅಂಗವಾಗಿ ಸೇರಿಕೊಂಡಿದ್ದಾಳೆ. ಇಡೀ ಆಟದ ಜಗತ್ತು ನಿರ್ಮಾಣಿಸುವುದಾಗಿದೆ. ತುಳು ಜನಪದ, ಪುರಾಣ, ಸಿರಿಸಂಧಿ, ಅಥವಾ ಸಿರಿಪಾಡ್ಯನ ಸಿರಿ ಮಹಿಳಾ ಬದುಕಿನ ಮುಖಗಳನ್ನು ಚಿರ್ತಿಸುತ್ತದೆ. ಮಹಿಳಾ ಹಕ್ಕುಗಳ ಪ್ರತಿಪಾದನೆ ಹೊಸತನದ ಹುಡುಕಾಟವೂ ನಡೆಯುತ್ತಿದೆ. ಪಿತೃ ಪ್ರಧನ ಸಂಸ್ಕೃತಿಯ ಹತ್ತು ಹಲವು ಮುಖಗಳನ್ನು ಮಹಿಳೆ ಪ್ರತಿಭಟನೆಯ ಮೂಲಕ ಹೊರಹಾಕಿದ್ದು ಕಂಡು ಬರುತ್ತದೆ. ಪುರುಷನ ಸ್ವಭಾವದಿಂದ, ತನಗಾದ ಅವಮಾನವನ್ನು ಸಂಪೂರ್ಣವಾಗಿ ಹೊರಹಾಕುವ ಕ್ರಿಯೆ ಇಲ್ಲಿ ದಾಖಲಾಗುತ್ತವೆ.

ಪುರುಷ ಅಧಿಕಾರವನ್ನು ಕೇವಲ ಮನೆಯಲ್ಲಿ ಮಾತ್ರವಲ್ಲ, ಅರಮನೆಗಳಂತವುಗಳಲ್ಲಿ ನಾಶಗೊಳಸುವ ಕ್ರಿಯೆ ನಮ್ಮ ಅನೇಕ ಕಟ್ಟುಪಾಡುಗಳು ಹುಟ್ಟು ಹಾಕುವ ಕ್ರಿಯೆ ಮಹಿಳೆ ಮಾಡುತ್ತಾಳೆ. ಪುರುಷ ಪ್ರಧಾನಕ್ಕೆ ಸವಾಲೊಡ್ಡಿದ ಸಿರಿ ಅಲ್ಲಿ ಮಹಿಳಾ ಪ್ರತಿನಿಧಿಯ ಕಾರಣವನ್ನು ಸೃಷ್ಟಿಸುತ್ತಾಳೆ. ಪಂಚಾಯತಿ, ಕೋರ್ಟು, ನ್ಯಾಯಬಾಹಿರವಾದ ವೇದಗಳನ್ನು ಒಲ್ಲೆನೆನ್ನುವ ತಿರಸ್ಕರಿಸುವ ಮೇಲ್ನೋಟ ಹುಟ್ಟ ಹಾಕಲಾಗಿದೆ. ಸರಿಯಾಗಿ ಮೂಗುತಿಗಳನ್ನು ಹೊರಚೆಲ್ಲಿ ಅರಮನೆಯಿಂದ ಹೊರಬಂದು ಮಹಿಳಾ ಪ್ರತಿಭಟನೆ ಸ್ವಾರ್ಥಕವಾದದ್ದು ಗಂಡನಿಗೆ ಸ್ವತಃ ಜನಪದ ಮಹಿಳೆಯ ವಿಚ್ಛೇದನಕ್ಕೆ ಆಹ್ವಾನ ನೀಡುವ ಹಾದಗೂ ವಿಚ್ಛೇದನವನ್ನು ನೀಡುವ ಬಗೆಯ ಕೂಡ ವಿಶೇಷವಾದದ್ದು. ತಾಯಿತನದ ಅಂತಃಕರಣ ಪ್ರೀತಿ ಹೊರಹಾಕಿ ತನ್ನ ನೆಲೆಯಲ್ಲಿಯೇ ಹೊಸದಾರಿ ಹುಡುಕುವ ಕ್ರಿಯೆ ಅನ್ಯೋನ್ಯತೆಯಿಂದ ಕೂಡಿದೆ. ತನ್ನ ಮರು ಮದುವೆಗೆ ಮಗ ಕುಮಾರನೇ ಪ್ರತಿರೋಧ ಉಂಟು ಮಾಡಿದಾಗ ಅದನ್ನು ಲೆಕ್ಕಿಸದೇ ಹೊಸ ಕನಸು ಆಕೆ ಬಿಡುವ ಕ್ರಿಯೆ ಮಾಡುತ್ತಾಳೆ.

ಸಿರಿ ಕುಟುಂಬದ ಸದಸ್ಯರು ಆರಾಧನೆಯ ಹೊತ್ತಿಗಾಗಲೆ ವಿಭಿನ್ನ ಜಾತಿ ವರ್ಗಗಳನ್ನೆ ಮಹಿಳೆಯನ್ನು ಕಟ್ಟಿಕೊಂಡಿವೆ. ಲೌಕಿಕ ಜಗತ್ತಿನಿಂದ ಸಿಗಲಾರದು. ಆಂತರಿಕ ಹಿನ್ನಲೆಯ ಪ್ರತಿಪಾದನೆ ಮಾಡಲಾಗಿದೆ. ಮಹಿಳಾ ಜೀವನಕ್ರಮದಲ್ಲಿ ಆಗುವ ಬದಲಾವಣೆಗಳನ್ನೊಳಗೊಂಡಿದೆ. ಹುಟ್ಟು ಮುಂಚೆ, ಮೈನೆರೆಯುವಿಕೆ ಮಾಡುವ ಮಹಿಳೆ ಇವೆಲ್ಲವುಗಳು ಕೂಡ ಆಚರಣೆಗಳಲ್ಲಿ ಮಹಿಳೆ ಹೀಗೆ ತನ್ನ ನೆಲೆಗಳಂದ ಆಚರಿಸಬೇಕು. ಅದನ್ನು ಗಂಡು ಹೇಗೆ ನಿರಾಕರಿಸುತ್ತಾನೆ. ಅನ್ಯಾಯವು ಹೇಗೆ ಪ್ರಧಾನ ಆಚರಣೆಗಳ ಹಿನ್ನೆಲೆ ನೋಡಬೇಕೆಂಬ ನಿಲುವು ವ್ಯಕ್ತವಾಗುತ್ತದೆ. ಕಲೆಗಳಲ್ಲಿ ಸಹಿತ ಮಹಿಳೆ ಒಂದು ದಾಖಲೆ ನಿರ್ವಹಿಸಬೇಕಾಗಿದೆ. ಲಿಂಗಾನುವ್ಯವಸ್ಥೆಯ ಪರಿಕಲ್ಪನೆಯಲ್ಲಿ ಮರೆಯುವ ಮಹಿಳಾ ಸಾಹಿತ್ಯವನ್ನು ಇತಿಹಾಸ ಕಲ್ಪಿಸಿ ಕೊಡುವ ಮಾರ್ಗ ಬಾಲೆಯ ಕಲಾವಿದರ ಚರಿತ್ರೆ ಬಹಳ ಮಹತ್ವದ್ದಾಗಿದೆ. ಆ ಕಾರಣಕ್ಕಾಗಿಯೇ ಸ್ತ್ರೀವಾದಿ ನೆಲೆಗಳಲ್ಲಿ ಕಾಣಸಿಗುತ್ತವೆ. ಅವರು ಅಂದರೆ ಸ್ತ್ರೀವಾದಿ ನೆಲೆಗಳು ಸಹಿತ ಇದನ್ನು ವಿವರಿಸಲು ದಾಖಲಿಸಿರುತ್ತಾರೆ.

ಮಹಿಳಾ ಜನಪದ ಕಲಾವಿದರನ್ನು ಅವರ ಜೀವನ ಚರಿತ್ರೆಯನ್ನು ದಾಖಲಿಸಬೇಕಾಗಿದೆ. ಕರ್ನಾಟಕದ ಜನಪದ ಇತಿಹಾಸ ಸಾಹಿತ್ಯ, ಕಲೆಗಳನ್ನು ತೆಗೆದು ನೋಡಿದಾಗ ಒಬ್ಬ ಮಹಿಳೆಯನ್ನು ಕೂಡ ದಾಖಲಿಸುವ ಕ್ರಿಯೆ ನಡೆದಿಲ್ಲ ಎಂಬುದು ವಾಸ್ತವದ ಸತ್ಯ. ಹಾಡು, ಕಥೆ, ಪಾಡ್ಡನ, ಗಿಣ್ಣೆತಂಬೂರಿ, ತೊಗಲು-ಗೊಂಬೆ, ಕುಣಿತ, ಪ್ರದರ್ಶನ ಕಲೆಗಳಲ್ಲಿ ಸಹಿತ ಮಹಿಳೆ ಚಾಚು ತಪ್ಪದೆ ಭಾಗವಹಿಸುತ್ತಲೆ ನಿಂತಿದ್ದಾರೆ. ಆದರೆ ಅವರಲ್ಲಿ ಯಾವ ತೀರ್ಮಾನವನ್ನು ಕೈಗೊಳ್ಳದೆ ಇರುವುದು ಕಂಡು ಬರುತ್ತದೆ. ಜಾನಪದದಲ್ಲಿ ಪ್ರಕಟವಾಗುವ ಮಹಿಳಾ ಪ್ರತಿಬಿಂಬ ಅಧ್ಯಯನವನ್ನು ಸ್ತ್ರೀವಾದ ನೆಲೆಗಳಲ್ಲಿ ಜನಪದ ಅಧ್ಯಯನವಾಗಬೇಕಾಗಿದೆ. ಪುರುಷ ಪ್ರಧಾನ ವಲಯ ರಚನೆಯಲ್ಲಿ ಜನಪದ ಸಾಹಿತ್ಯದಲ್ಲೂ ಮಹಿಳೆ ಭಾರತೀಯ ಪರಿಕಲ್ಪನೆಯಲ್ಲಿ ಸಹಿತ ತನ್ನ ಅಸ್ತಿತ್ವ ರೂಪಿಸಿಕೊಂಡಿದೆ. ಈ ಕಾರಣದಿಂದ ಸ್ತ್ರೀವಾದ ಮತ್ತು ಜನಪದ ಸಾಹಿತ್ಯವು ತನ್ನಲ್ಲಿ ವಿಶಿಷ್ಟ ನೆಲೆಗಳಲ್ಲಿ ಅಭಿವ್ಯಕ್ತಗೊಂಡಿದೆ. ಈವತ್ತಿನ ಜಾಗತೀಕರಣ-ಖಾಸಗೀಕರಣ ಉದಾತೀಕರಣದ ಹೊತ್ತಿನಲ್ಲಿ ನಾವೆಲ್ಲರೂ ನಿಂತು ನೋಡಿದಾಗ ನಮ್ಮ ಭಾರತೀಯ ಕರ್ನಾಟಕದ ಜನಪದ ಸಾಹಿತ್ಯ ಕಲೆಗಳು ಮಾಯವಾಗುವ ಅಪಾಯದ ಸ್ಥಿತಿಯಲ್ಲಿವೆ. ಈ ಅಪಾಯದಿಂದ ಹೊರಬರಬೇಕು ದೇಶಿಯ ಮಾರ್ಗ ಹಿಡಿಯಬೇಕು. ದೇಶಿಯತೆ ತನ್ನ ಅಂತರಂಗದ ಮೂಲಕ ಹೊರ ಬಂದದ್ದೇ ಬಹಿರಂಗವಾಗಿದೆ. ಇದರಿಂದ ಜನಪದ ಸಾಹಿತ್ಯದ ಮೂಲ ಹಾಗೂ ಸಂಸ್ಕೃತಿಗಳು ತನ್ನ ಅನ್ಯೋನ್ಯತೆಯನ್ನು ಕಾಪಾಡಲು ಸದಾ ಹಾತೊರೆಯುತ್ತವೆ. ಒಟ್ಟಾಗೆ ನಾಡು-ಭಾಷೆ, ಸಂಸ್ಕೃತಿಗೆ ಅದರಲ್ಲೂ ಮಹಿಳೆಗೆ ಹೆಚ್ಚಿನ ಒತ್ತುಕೊಟ್ಟು ಜನಪದ ಸಾಹಿತ್ಯ ತನ್ನದೇ ಆದ ಪೂರ್ವ ನಿಯೋಜಿತ ಅಧ್ಯಯನ ಹಾಗೂ ಬಹುಮುಖಿ ನೆಲೆಗಳ ಅಧ್ಯಯನದಿಂದ ಸ್ತ್ರೀವಾದದ ಪರಿಕಲ್ಪನೆ ಜನಪದಕ್ಕೆ ಮಹಿಳೆಗೂ

ಅನ್ವಯಿಸಿಕೊಂಡ ತನ್ನ ಸಹಾಯ ಸೋತು ಅರಳ ನಿಂತಿದೆ. ಇದನ್ನೆ ನಾವು-ನಿವೆಲ್ಲರೂ ಸ್ವಾಗತಿಸಬೇಕಾಗಿದೆ.

# ಅಧ್ಯಾಯ-೪
# ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ

ಮಹಿಳೆ 'ಹೆಣ್ಣು' ಎನ್ನುವ ಪದ ಪಿತೃ ಪ್ರಧಾನ, ಪುರಷ ಪ್ರಧಾನ ಸಂಸ್ಕೃತಿಯಲ್ಲಿ ಕಳೆದು ಹೋದದ್ದಾಗಿದೆ. ನಮ್ಮ ಮೂಲ ಪರಂಪರೆಯಿಂದ ಇಂದಿಗೂ ಕೂಡ ನಾವು ನೋಡುತ್ತ ಬಂದಂತೆ ಹೆಣ್ಣನ್ನು ವರಬೇಡಿ, ಕಾಡಿಕೊಂಡು ಹಡೆಯುವ ಪಡೆಯುವ ಸಂದರ್ಭವಂತೂ ಬಂದಿಲ್ಲ. ಗಂಡನ್ನು ವರವಾಗಿ ಪಡೆದು ಹಂಬಲಿಸಿಕೊಂಡು ಪಡೆಯುವುದು ಸರ್ವ ಸಾಮಾನ್ಯ ಇದಕ್ಕೆ ಭಾರತೀಯ ಸಂಸ್ಕೃತಿ ಪರಂಪರೆಯೆಂಬುವುದೊಂದು ಹೊಂದಿಕೊಂಡುಬಂದಿದೆ. ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿಗೆ ಪೂಜ್ಯ ಭಾವನೆಯನ್ನು ಕೊಟ್ಟಿದ್ದೇವೆ. ಯಾವ ಜಗತ್ತಿನಲ್ಲಿಯು ಸಹ ಹೆಣ್ಣನ್ನು ಸಮಾನವಾಗಿ ಕಂಡಿಲ್ಲ ಯಾಕೆ ಹೆಣ್ಣು ಎನ್ನುವುದೇ ಅಪರಾಧವೆಂಬಂತೆ ಆಗಿದೆ. ಹೆಣ್ಣು ಹುಟ್ಟುವುದು ಸಹ ಎಲ್ಲರಿಗೂ ನೋವನ್ನು ತಂದಿರುತ್ತದೆ. ಹೆಣ್ಣು ಎಂಬ ಪದ ಪಾಪವಾಗಿದೆ. ಅಯ್ಯೋ ಆಗಿದೆ ಇದು ಹುಟ್ಟಿತಾ? ಎಂಬ ಅನೇಕ ಪ್ರಶ್ನೆಗಳು ಕಾಡತೊಡಗುತ್ತವೆ. ಹೆಣ್ಣು ಹುಟ್ಟಿದಾಗ ಆಗುವ ಆತಂಕ, ಭಯ ಮತ್ತ್ಯಾವ ಸಂದರ್ಭದಲ್ಲಿ ಆಗುವುದಿಲ್ಲ. ಇದಕ್ಕೆ ಮೂಲಕಾರಣ ನಮ್ಮೊಳಗಡೆ ನಾವೇ ಹಾಕಿಕೊಂಡು ಬಂದ ಚೌಕಟ್ಟು ಮಿತಿ ಹಾಗೂ ಒಂದರ್ಥದಲ್ಲಿ ಕಾಣಸಿಗಬೇಕಾದ ಅಂಶ ನಮಗೆ ದೊರಕುತ್ತದೆ.

ಒಟ್ಟಾರೆಯಾಗಿ ಮಹಿಳೆ ತಾಯಿ, ಜನನಿ ಎನ್ನುತ್ತೇವೆ. ಭೂಮಿಗೆ ಹೋಲಿಸುತ್ತವೆ. ನಾವೆಲ್ಲ ಜನಿಸಿದ್ದು ತಾಯಿಯ ಗರ್ಭದಲ್ಲಿ ಎಂದೆಲ್ಲ ಒಪ್ಪಿಕೊಂಡು ಬಾಳುತ್ತೇವೆ. ಆದರೆ ನಾವೇ ಇಂದು ಹೇಗಾಗಿದ್ದೇವೆ ಎಂಬ ಸ್ಥಿತಿ ನೋಡಿದರೆ ಸೋಜಿಗವಾಗಿದೆ. ಮಹಿಳೆಯನ್ನು ಮಾತೃದೇವೋಭವ ಎನ್ನುತ್ತೇವೆ. ಜನನಿ ಜನ್ಮಭೂಮಿ ಎನ್ನುತ್ತೇವೆ. ದೇವರು-ದೇವತೆಗಳಿಗೆ ಹೋಲಿಸುತ್ತೇವೆ. ಆಚಾರ, ವಿಚಾರ, ಪುರಾಣ, ಪುಣ್ಯಕತೆಗಳಲ್ಲಿ ಮಹಿಳೆಗೆ ಪ್ರಾಮುಖ್ಯತೆ ಹೆಸರಲ್ಲಿ ಕೊಟ್ಟಿದ್ದೇವೆ. ಪ್ರಸ್ತುತವಾದ ದಿನಗಳಲ್ಲಿ ಆಕೆಗೆ ಯವದೇ ರೀತಿಯ ಸ್ವಾತಂತ್ರ್ಯವನ್ನು ನಾವು ಕೊಟ್ಟಿಲ್ಲ. ನಾಲ್ಕು ಗೋಡೆಯ ಬಂಧನದಲ್ಲಿ ಇಟ್ಟಿದ್ದೇವೆ. ದೈಹಿಕವಾಗಿ, ಮಾನಸಿಕವಾಗಿ, ಆಕೆಗೆ ಹಿಂಸೆಯನ್ನು ನೀಡಿದ್ದೇವೆ. ಪ್ರತಿಯೊಂದು ವಿಚಾರದಲ್ಲಿ ಆಕೆಗೆ ಮುಂದುಮಾಡಿ ಹಿಂದೆ ನೋಡುವ ಪ್ರವೃತ್ತಿ ಇಲ್ಲಾಗಿದೆ. ಕಾಲಕ್ಕಿಂತ ಕಸವಾಗಿ ಕಂಡಿದ್ದೇವೆ. ಇದು ಹೊರತುಪಡಿಸಿದರೆ ನಾವೆ ಮಹಿಲೆಯನ್ನು ಯಾವ ಕಾರಣಕ್ಕೆ ಬೇಕಾದವಳು ಎನ್ನುವುದೇ ಇಲ್ಲ ಇದು ದುರಂತವಾದ ಸಂಗತಿಯಾಗಿದೆ.

ನಮ್ಮ ಸಮಾಜ ಬಹು ಮುಖಿ ಸಂಸ್ಕೃತಿ ಒಳಗೊಂಡಿದ್ದು, ಪಿತೃ ಪ್ರಧಾನ, ವ್ಯವಸ್ಥೆ ಪುರಷ ಪ್ರಧಾನ ವ್ಯವಸ್ಥೆಯು ಸಂಸ್ಕೃತಿಯಲ್ಲಿ ಹೆಣ್ಣು ಹುಟ್ಟುವುದೇ ಮಹಾಪರಾಧವಾಗಿದೆ.

ಹೆಣ್ಣನ್ನು ಬಯಸಿ ಹುಟ್ಟುವುದಲ್ಲ ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ ಎಂದು ಭಾವಿಸಲಾಗಿದೆ. ಭಾವಿಸುತ್ತಾರೆಂದು ಕೂಡಾ ಸಂಪೂರ್ಣವಾದ ವ್ಯವಸ್ಥೆಯಲ್ಲಿ ನಾವೆಲ್ಲ ತಲೆತಗ್ಗಿಸಬೇಕಾಗಿದೆ. ಮಹಿಳೆಗೆ ಎಲ್ಲಾ ಪ್ರಾತಿನಿಧ್ಯ ನೀಡಬೇಕೆಂದು ಆಶಯ ವ್ಯಕ್ತಪಡಿಸುವಂತೆ ನಾವು ಕೊಟ್ಟಿದ್ದು ಎಷ್ಟು ನಾವು ಅವಳಿಗೆ ನೀಡಿದ ಪ್ರಾಮುಖ್ಯತೆ ಕುರಿತು ಅವಲೋಕಿಸದೆ ನಾಚಿಕೆ ಬರಬೇಕಾಗಿದೆ.

ಮಹಿಳೆ ಬಂದಲ್ಲ ಒಂದು ಕಾರಣಕ್ಕೆ ಗಂಡಿನ ಆಧೀನದಲ್ಲಿಯೇ ಬಾಳಬೇಕೆಂಬ ಕಟ್ಟಪ್ಪಣೆ ಮಾಡಬೇಕಾಗುತ್ತದೆ. ಹಾಗೆ ಮಾಡಲು ಸಹಿತ ಶ್ಯಕವಾಗಿದೆ. 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬ ಅತ್ಯಂತ ತಾತ್ಸಾರದ ಮಾತುಗಳನ್ನು ಆಡಲಾಗುತ್ತದೆ. ಇದರಿಂದ ಮಹಿಳೆ ತನ್ನ ನೋವುಗಳನ್ನು ಹೊರಹಾಕಬೇಕಾಗಿದೆ. ಹೆಣ್ಣು ಹುಟ್ಟಿನಿಂದ ನೋವುಗಳು ಅನುಭವಿಸಬೇಕು. ಶೋಷಣೆ ಆಕೆಗೆ ತಪ್ಪಿದ್ದಲ್ಲ ಈ ಕಾರಣಕ್ಕಾಗಿಯೇ ಬಹು ಮುಖಿ ಸಂಸ್ಕೃತಿ ನೆಲೆಯ ಬಹು ಪಾಲು ಜನ ಸಮುದಾಯ ಮಹಿಳೆಗೆ ತಿರಸ್ಕಾರ ಮಾಡುತ್ತಲೆ ಬಂದಿದ್ದಾರೆ. ಹೆಣ್ಣು-ಹುಣ್ಣು ಎಂದು ಕರೆಯುವ ಮೂಲಕ ಈ ಭೂಮಿಗೆ ಬಂದ ತಕ್ಷಣವೇ ಹೇಳಿದ್ದಾರೆ ಬಾಲ್ಯದಲ್ಲಿ ತಂದೆ-ತಾಯಿಗಳ ಆಶ್ರಯದಲ್ಲಿ, ಯವ್ವನದಲ್ಲಿ ಗಂಡನ ಆಶ್ರಯದಲ್ಲಿ, ಮುಪ್ಪಿನಲ್ಲಿ ಮಕ್ಕಳ ಆಶ್ರಯದಲ್ಲಿ ಬಾಳಬೇಕು ಓಡಾಡಬೆಕು. ಆಕೆಯ ಆಸರಿಕೆ-ಬೇಸರಿಕೆ, ನೋವು-ನಲಿವುಗಳೆಲ್ಲವನ್ನು ಹೊರ ಹಾಕಬೇಕಾದ ಪರಿಸ್ಥಿತಿ ನಿರ್ಮಾಣ ಮಾಡದೆ ಆಕೆಯನ್ನು ಹುಟ್ಟಿನಿಂದ ಸಾಯುವ ತನಕ ಒಂದೇ ಹಂತದಲ್ಲಿ ಸಣ್ಣದಾಗಿ ಜೀವನವನ್ನು ಕೊಲ್ಲುತ್ತಾ ಬಂದಿದ್ದೇವೆ. ಜೀವಂತವಾಗಿ ಮಹಿಳೆಗೆ ನಾವು ಹಿಂಸೆಯನ್ನು ಕೊಡುತ್ತಲೇ ಬಂದಿದ್ದೇವೆ.

ಮಹಿಳೆ ಇನ್ನೊಬ್ಬರ ಅಧೀನದಲ್ಲಿಯೇ ಬದುಕು ನಡೆಸಬೇಕೆಂಬ ನೀತಿ ಕಟ್ಟಾಜ್ಞೆಗಳೂ ಇಂದಿಗೂ ಪ್ರೇರಕವಾಗಿವೆ. ಜೀವನದಲ್ಲಿ ಅನೇಕ ಬಗೆಯಾದ ನೋವು, ಸಂಕಟ, ಯಾತನೆ ಶೋಷಣೆ ಎಲ್ಲವುಗಳನ್ನು ಅನುಭವನಿಸಬೇಕಾಗಿದೆ. ಇಷ್ಟಾದರೂ ಸ್ವತಃ ತಾಯಿಯಾದವಳೇ ಹೆಣ್ಣು ಬೇಡ ಗಂಡು ಬೇಕು ಎಂಬ ವಾದವನ್ನು ಮಾಡುವ ಹಂತವಿದ್ದಾಗ ಯಾರಿಂದ ಯಾರಿಗೆ ಯಾರು ಯಾರಿಗೆ ನೋವು ಶೋಷಣೆ ಕೊಡುತ್ತಾರೆಂಬ ಅಂಶವು ನಮ್ಮ ಗಮನಕ್ಕೆ ಬರುತ್ತದೆ. ಇಡೀ ಜಗತ್ತು ವಿಶಾಲವಾಗಿದೆ. ಹೆಣ್ಣು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಮೀರಿ ಅದು ಬೆಳವಣಿಗೆ ಆಗುತ್ತಿದೆ. ಇಷ್ಟಾದರ ತಾಯಿ ಮಹಿಳೆ ತನ್ನ ಹುಟ್ಟಿದ ಕೂಸು ಹೆಣ್ಣೆ ಇರಬೇಕೆಂಬ ತಾಯಿಯ ಅಂತಃಕರಣ ವಾತ್ಸಲ್ಯ ಪ್ರೀತಿ ಸೌಜನ್ಯತೆ ಅರಿತುಕೊಳ್ಳಲು ಹೆಣ್ಣು ಮಹಿಳೆಬೇಕು.

ತಾಯಿಯ-ಮನೆ ಪ್ರತಿಯೊಂದು ಸುಖ ದುಃಖವನ್ನು ಅರಿತುಕೊಂಡು ನಡೆಯಬೇಕಾದರೆ ಅವನ್ನು ಅರ್ಥೈಸಿಕೊಂಡು ಹೋಗಬೇಕಾದರೆ ನೆಮ್ಮದಿ ತರಬೇಕಾದರೆ 'ಹೆಣ್ಣು ಮಗು ಬೇಕು' ಹೆಣ್ಣಿನಿಂದಲೇ ಬಾಳಿನ ಕಣ್ಣು ಅನೇಕ ಅಂಶಗಳು ನಮಗೆ ಪ್ರಕಾರಗೊಳ್ಳುತ್ತವೆ. ಹೆಣ್ಣು-ಮಹಿಳೆಯೇ ಕುಟುಂಬದ ಆಧಾರಸ್ಥಂಭವಾಗುತ್ತಾಳೆ. ತಾಯಿಯ ಅಂತಃಖರಣದ ನುಡಿಗಳನ್ನು ತಂದೆಯ ವಾತ್ಸಲ್ಯದ ಪ್ರೀತಿಯನ್ನು ಸಹ ಹೊರಹಾಕಲು ಮಹಿಳೆ-ಹೆಣ್ಣು ಮಗು ಬೇಕು. ತಾಯಿ-ತಂದೆ ಮನೆಯನ್ನು ಹಾಗೂ ಗಂಡನ ಮನೆ ಎರಡನ್ನು ಸಮಾನ ಆಧಾರ ಸ್ತಂಭವನ್ನಾಗಿ ಸ್ವೀಕರಿಸಿಕೊಂಡು ಹಡೆದ-ಹುಟ್ಟಿದ ತವರು ಮನೆಗೂ ಮಾತ್ರ ಕೊಟ್ಟ ಮನೆಗೂ ಸಮಾನತೆಯ ಜ್ಯೋತಿ ಹಚ್ಚಬೇಕಾಗಿದೆ. ಜೀವನವನ್ನು ಸಂಪೂರ್ಣವಾಗಿ ಅರಿತುಕೊಂಡು ನಡೆಯಬೇಕಾಗಿದೆ. ಆ ಉದ್ದೇಶದಿಂದ ಮಹಿಳೆಗೆ ಎರಡು ಕಡೆ ಪ್ರಾಶಸ್ತ್ಯ ಉಂಟಾಗಿದೆ. ಮಹಿಳೆ ತನ್ನ ಅಂತರಂಗದ ನೋವುಗಳನ್ನು ಹೊರಗೆಡುವಲು ಸಾಧ್ಯವಾಗದೇ ಹೋದಾಗ ಅನೇಕ ಸಂದೀಗ್ಧ ಪರಿಸ್ಥಿತಿ ಆಕೆಗೆ ಉಂಟಾಯಿತು. ಸಂಚಿ ಹೊನ್ನಮ್ಮನಂತಹ ಅನೇಕ ಮಹಿಳೆಯರು ಸಹಿತ ಸಂಪೂರ್ಣವಾಗಿ ಗಂಡನ ಆರೈಕೆ-ಮಕ್ಕಳ ಒಡನಾಟದಲ್ಲಿ ಬಾಳಬೇಕೆಂಬ ಆಶಯ ಹೊಂದಿದ್ದಾಳೆ. ವಚನಕಾರರು ಹಾಗೂ ದಾಸರಲ್ಲಿಯು ಸಹಿತ ಮಹಿಳೆಗೆ ಮುಕ್ತವಾದ ಸ್ವಾತಂತ್ರ್ಯ. ಸಮಾನತೆ. ಭಾತೃತ್ವ ತರಲು ಹಾತೊರೆದದ್ದು ಕಾಣುತ್ತೇವೆ. ಇದರ ಹಾಗೆ ತತ್ವ ಪದಕಾರರು ಹಾಗೂ ಸ್ವರವಚನಕಾರರು ಸಹಿತ ಮಹಿಳಾ ಪ್ರತಿಭಟನೆಯ ಅಂಶಗಳು ಸ್ಪಷ್ಟವಾದ ಹಾದಿ ದೊರೆಯದಿದ್ದರು ಆ ಸಂವೇದನೆಗಳು ಬಳಕೆಗೊಂಡಿವೆ. ಸ್ವರ ವಚನಕಾರರು ಸಂಪೂರ್ಣ ವಚನಕಾರರ ಆಶಯಗಳನ್ನು ಹೊಂದಿದ್ದು ಸ್ವರ ವಚನದ ಹಾಡಿನ ರಚನೆ ಮಾತ್ರ ಬದಲಾವಣೆ ಕಂಡು ಬರುತ್ತದೆ. ಅಲ್ಲಿಯ ಭಾಷೆ-ಛಂದಸ್ಸಿನ ಹಿತದೃಷ್ಟಿಯಿಂದ ಮಾತ್ರ ನೋಡಬಹುದೇ ಹೊರತು ಸಂಪೂರ್ಣವಾಗಿ ಅಲ್ಲ. ಶರಣರ ಮಾದರಿಯಲ್ಲಿ ಮಹಿಳಾ ಪ್ರತಿಭಟನೆಯ ಅಂಶಗಳು ದೊರಕುತ್ತವೆ. ತತ್ವಪದಕಾರರು ನೂರಾರು ದಲಿತ ಮುಸ್ಲಿಂ ಮಹಿಳೆ ಹಾಗೂ ಇತರ ತತ್ವ ಪದಕಾರರೆಂದು ವಿನಂತಿಸಿಕೊಂಡು ಅಧ್ಯಯನ ಮಾಡುತ್ತ ಬಂದಿದ್ದಾರೆ. ಆ ಕಾರಣಕ್ಕಾಗಿಯೇ ಅವರಲ್ಲಿ ನೀತಿ ಪ್ರಧಾನವಾದ ಅಂಶಗಳು ಮಹಿಳಾ ಪ್ರತಿಭಟನೆಗೆ ಎತ್ತಿ ಹಿಡಿಯುತ್ತದೆ. ಒಂದು ತತ್ವ ನಿಷ್ಟತೆ ಆಧಾರದ ಮೇಲೆ ಅವುಗಳ ಬೆಳವಣಿಗೆ ಆಗಿಲ್ಲ. ಆಧ್ಯಾತ್ಮಿಕ-ನೀತಿ ಹಿನ್ನೆಯಲ್ಲಿಯೇ ಈ ಕಡೆಗಳಲ್ಲಿ ಮಹಿಳಾ ಚಿತ್ರಣ ಕೊಟ್ಟಿದ್ದಾರೆ.

"ಪ್ರತಿಭಟನೆ" ಎಂಬ ಪದದ ಅರ್ಥವನ್ನು ಎರಡು ಪರಂಪರೆಗಳಲ್ಲಿ ಕಟ್ಟಿಕೊಳ್ಳಬಹುದಾಗಿದೆ. ಜನಪದ ಸಾಹಿತ್ಯದಲ್ಲಿ ಪ್ರತಿಭಟನೆ ಎಂದಾಗ. ಸಾಹಿತ್ಯ ಪರಂಪರೆಯಲ್ಲಿ ಬೆಳೆದು ಬಂದ ಪ್ರತಿಭಟನೆಯ ಅಂಶಗಳ ಒಂದು ಪರಂಪರೆಯಾದರೆ:

ಪ್ರತಿಭಟನೆಯೇ ಸಾಹಿತ್ಯದ ಕೇಂದ್ರವಾಗಿ, ಪ್ರತಿಟನಾ ಸಾಹಿತ್ಯ ಹೊರಬರುವುದು. ಎರಡನೇ ಪರಂಪರೆ ಜನಪದ ಸಾಹಿತ್ಯದಲ್ಲಿ ಮೊದಲನೇ ಪರಂಪರೆ ಮಾತ್ರ ಕಾಣಿಸಿಕೊಳ್ಳುತ್ತದೆ. ಎರಡನೇ ಪರಂಪರೆಗೆ ಇಲ್ಲಿ ಅವಕಾಶವಿಲ್ಲ. ಅದರಲ್ಲೂ ಮಹಿಳಾ ಪ್ರತಿಭಟನೆಯ ವಿಷಯ ಬಂದಾಗ ಬೆರಳೆಣಿಕೆಯಷ್ಟು ಉದಾಹರಣೆಗಳು ಮಾತ್ರ ಸಿಗುತ್ತವೆ. ಜನಪದ ಸಾಹಿತ್ಯದಲ್ಲಿ ಈ ಪ್ರತಿಭಟನೆಗಿರುವ ಇಂತಹ ಮಿತಿಗಳನ್ನು ಅರ್ಥೈಸಿಕೊಳ್ಳುತ್ತಲೇ ಈ ಪ್ರಬಂಧದಲ್ಲಿ ಮಹಿಳಾ ಪ್ರತಿಭಟನೆಯ ಅಂಶಗಳನ್ನು ಚರ್ಚಿಸಲಾಗಿದೆ.

ಯಾವುದೇ ಸಾಹಿತ್ಯದಲ್ಲಿ ಪ್ರತಿಭಟನೆಯ ಅಂಶಗಳಿರುವುದು ಸಹಜ. ಆದರೆ ಪ್ರತಿಭಟನೆಯೇ ಸಾಹಿತ್ಯವಾಗಿ ಬೆಳೆದುಬಂದ ಸಂದರ್ಭಗಳು ವಿರಳ. ಸಾಹಿತ್ಯ ಪರಂಪರೆಯಲ್ಲಿ ಹೀಗೆ ಪ್ರತಿಭಟನೆಯೇ ಮುಖ್ಯವಾಗಿ ಬೆಳೆದು ಬಂದ ಪರಂಪರೆಗಳಿಗೆ ಚಳುವಳಿ ಸಾಹಿತ್ಯವೆಂದು ಗುರುತಿಸಲಾಗುತ್ತದೆ. ಅಂತಹ ಸಾಹಿತ್ಯಕ ಚಳುವಳಿಗಳಲ್ಲಿ ವಚನ ಚಳುವಳಿ, ಪ್ರಗತಿಶೀಲ ಚಳುವಳಿ, ದಲಿತ-ಬಂಡಾಯ ಚಳುಳಿಗಳು ಮುಖ್ಯವಾಗುತ್ತವೆ. ಆದರೆ ಜನಪದ ಸಾಹಿತ್ಯ ಹೀಗೆ ಚಳುವಳಿ ಸಾಹಿತ್ಯವಾಗಿ ಬೆಳೆದದ್ದಲ್ಲ. ಅದು, ಇರುವ ಬದುಕನ್ನು ಯಥಾವತ್ತಾಗಿ ಸ್ವೀಕರಿಸುತ್ತಲೇ ಅದರೊಳಗಿರುವ ಲೋಪ-ದೋಷಗಳನ್ನು ಅಲ್ಲಲ್ಲಿ ಅಭಿವ್ಯಕ್ತಿಸಿದೆ. ಅದರಲ್ಲಿಯೂ ಮಹಿಳಾ ಪ್ರತಿಭಟನೆಗಳು ಕಾಣಿಸಿಕೊಂಡದ್ದು ತುಂಬ ವಿರಳವೆಂದೇ ಹೇಳಬಹುದಾಗಿದೆ. ಕನ್ನಡ ಜನಪದ ಸಾಹಿತ್ಯದಲ್ಲಿ ಕರಾವಳಿ ಕರ್ನಾಟಕದ ಕಡೆ ಈ ರೀತಿಯ ಪ್ರತಿಭಟನೆಯ ಸಂಗತಿಗಳು ಕಾಣಿಸಿಕೊಳ್ಳುತ್ತವೆ. ಅಂತಹ ಒಂದು ಸಣ್ಣ ಹಳ್ಳವಾಗಿ ಹರಿದ ಈ ಪರಂಪರೆ ಸ್ತ್ರೀವಾದ ಕೇಂದ್ರಿತ ಇಂದಿನ ಅಧ್ಯಯನಕ್ಕೆ ಪೂರಕವಾಗಬಹುದೆಂಬ ಕಾರಣದಿಂದ ಈ ಪ್ರಯತ್ನ ಮಾಡಲಾಗಿದೆ.

"Literature renews its vitality through an endless and invitable process of convention and revolt" ಎಂದು Douglas Bush ಹೇಳುತ್ತಾನೆ. ಸಾಮಾಜಿಕ ಜೀವನದಲ್ಲಿ ಅತೃಪ್ತಿ, ಅಸಮಾನತೆ ಕಾಣಿಸಿಕೊಂಡಾಗ ಪ್ರತಿಭಟನೆಯ ಬೀಜ ಮೊಳೆಯಲಾರಂಭಿಸುತ್ತದೆ. ಅದರ ಶೋಷಣೆಯ ಸ್ವರೂಪ ಉಗ್ರವಾದಂತೆಲ್ಲ ಅದು ಚಳುವಳಿಯ ರೂಪ ಪಡೆದುಕೊಳ್ಳುತ್ತದೆ. ಅತ್ಯಂತ ಉಗ್ರವಾದಾಗ ಅದು ಕ್ರಾಂತಿಯ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಪ್ರತಿಭಟನೆಗೆ ಚಳುವಳಿಯ ಸ್ವರೂಪ ದಕ್ಕದೇ ಹೋದರೆ, ಅದು ಕೇವಲ ಸಿಟ್ಟಾಗಿ-ಹತಾಶೆಯ ಭಾವದಲ್ಲಿ ಕರಗಿಹೋಗುತ್ತದೆ. ಶಿಷ್ಟ ಸಾಹಿತ್ಯ ಪರಂಪರೆಯಲ್ಲಿ ಹೀಗೆ ಪ್ರತಿಭಟನೆಯ ಪರಂಪರೆಗೆ ಚಳುವಳಿಯ ರೂಪ ಸಿಕ್ಕಾಗ ಅಲ್ಲಿ ಚಳುವಳಿ ಸಾಹಿತ್ಯ ನಿರ್ಮಾಣವಾಗಿದೆ. ವಚನ ಚಳುವಳಿ ಇದಕ್ಕೆ ಮುಖ್ಯ ಉದಾಹರಣೆಯಾಗಿದೆ. ಅದೇ ರೀತಿ

ಆಧುನಿಕ ಸಂದರ್ಭದಲ್ಲಿ ಬೆಳೆದ ಪ್ರಗತಿಶೀಲ ಹಾಗೂ ದಲಿತ-ಬಂಡಾಯ ಚಳುವಳಿಗಳು ಮನುಷ್ಯ ಬದುಕಿನ ಅನೇಕ ಸಾಧ್ಯತೆಗಳನ್ನು ಕಟ್ಟಿಕೊಟ್ಟಿವೆ. ಈ ಮಾತನ್ನು ಜಾನಪದದ ಸಂದರ್ಭದಲ್ಲಿ ಹೇಳಲಿಕ್ಕಾಗುವುದಿಲ್ಲ. ಆದರೆ ಜಾನಪದದಲ್ಲಿ ಅಂತಹ ಘಟನೆಗಳು ಕಾಣಿಸಿಕೊಂಡಿವೆ. ಶೋಷಣೆಯ ವಿರುದ್ಧ ಚಳುವಳಿ ಕಟ್ಟದಿದ್ದರೂ, ತಾವಿದ್ದ ಕಾಲಘಟ್ಟದಲ್ಲಿ ತಮ್ಮ ಇತಿ ಮಿತಿಗಳಲ್ಲಿ ಅಂದಿನ ಜನತೆ-ಅನ್ಯಾಯದ ವಿರುದ್ಧ-ಅತ್ಯಾಚಾರದ ವಿರುದ್ಧ-ಶೋಷಣೆಯ ವಿರುದ್ಧ ಪ್ರತಿಭಟನೆ ಮಾಡಿದ್ದಾರೆ. ಇದಕ್ಕೆ ಮಹಿಳೆಯರೂ ಹಿಂದೆ ಬಿದ್ದಿಲ್ಲ. ಕರಾವಳಿ ಕರ್ನಾಟಕ ಮಾತೃ ಪ್ರಧಾನ ವ್ಯವಸ್ಥೆಯನ್ನು ಹೊಂದಿದ್ದರಿಂದ ಅಲ್ಲಿ ಇಂತಹ ಮಹಿಳಾ ಪ್ರತಿಭಟನೆಗಳು ಅಭಿವ್ಯಕ್ತಗೊಳ್ಳಲು ಸಾಧ್ಯವಾಗಿದೆ. ಸ್ಥಗಿತತೆ ಮತ್ತು ಚಲನಶೀಲತೆಗಳ ನಡುವೆ ನಡೆಯುವ ಇಂತಹ ಅನೇಕ ಸಂಘರ್ಷಗಳು ಸಂಖ್ಯೆಯಿಂದ ಕಡಿಮೆಯಿದ್ದರೂ ಕೂಡ ಚಾರಿತ್ರಿಕವಾಗಿ ತುಂಬ ಮುಖ್ಯವೆನಿಸುತ್ತವೆ.

ಮಹಿಳೆಯ ದೇಹ ಮತ್ತು ಮನಸ್ಸನ್ನು ತನ್ನ ಅಧೀನದಲ್ಲಿರಿಸಿಕೊಂಡ ಪುರುಷ ಪ್ರಧಾನ ವ್ಯವಸ್ಥೆ ಅವಳ ದುಡಿಮೆ ಮತ್ತು ತಾಯ್ತನದ ಹಕ್ಕನ್ನು ತನ್ನ ಹತೋಟಿಯಲ್ಲಿಟ್ಟುಕೊಂಡದ್ದೇ ಮಹಿಳಾ ಪ್ರತಿಭಟನೆಗೆ ಮುಖ್ಯ ಕಾರಣವಾಯಿತು. ಮಹಿಳೆ ಎರಡು ರೀತಿಗಳಿಂದ ಶೋಷಣೆಗೊಳಗಾಗಿದ್ದಾಳೆ. ಈ ದೇಶ ಒಪ್ಪಿಕೊಂಡಿದ್ದ ಚಾತುರ್ವರ್ಣದ ಅಸಮಾನತೆಯ ವ್ಯವಸ್ಥೆ ಒಂದು ಕಡೆಯಾದರೆ, ಕುಟುಂಬದೊಳಗಡೆಯೇ ಉಸಿರು ಕಟ್ಟಿಸಿದ್ದ ಯಜಮಾನ ಸಂಸ್ಕೃತಿಯ ನಿರಂತರ ಶೋಷಣೆ ಮತ್ತೊಂದು ಕಡೆಯಾಗಿದೆ. ಹೀಗೆ ಒಳಗೆ ಮತ್ತು ಹೊರಗೆ ಮಹಿಳೆ ಶೋಷಣೆಗೊಳಗಾಗಿದ್ದಾರೆ. ಜನಪದ ಮಹಿಳೆಯಂತೂ ಶೋಷಣೆಯ ಮುಖ್ಯ ಬಲಿ ಪಶುವಾಗಿದ್ದಾಳೆ. ಅವಳಿಗೆ ಸುತ್ತಲೂ ಶೋಷಣೆಯ ಮುಖಗಳೇ ಕಾಣಿಸುತ್ತವೆ. ಅನಕ್ಷರತೆ, ಅಜ್ಞಾನ, ಸಂಪ್ರದಾಯ, ಮೂಢನಂಬಿಕೆ, ಮುಗ್ಧತೆಯಿಂದಿರುವ ಜನಪದ ಮಹಿಳೆ ಈ ವ್ಯವಸ್ಥೆಯ ಶೋಷಣೆಯ ಕ್ರಿಯೆಗೆ ಮೊದಲ ಬಲಿಯಾಗಿದ್ದಾಳೆ.

ದೇಹ ರಚನೆಯ ಪ್ರಕ್ರಿಯೆಯೇ ಈ ಶೋಷಣೆಯ ಪ್ರಾರಂಭದ ಹಂತವಾಗಿದೆ. ಮಗು ಜನಿಸಿದ ತಕ್ಷಣವೇ ಹೆಣ್ಣು-ಗಂಡು ಎಂದು ಗುರುತಿಸುವ ಪದ್ಧತಿ ಆದಿ ಮಾನವನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಅಂದಿನಿಂದ ಪ್ರಾರಂಭವಾದ ಈ ತಾರತಮ್ಯ ನೀತಿ ಇಂದಿನ ಹೆಣ್ಣು ಭ್ರೂಣಹತ್ಯೆಯವರೆಗೂ ಮುಂದುವರೆದಿದೆ. ಗಂಡಿಗೊಂದು ನೀತಿ-ಹೆಣ್ಣಿಗೊಂದು ನೀತಿ ರಚನೆಯಾದಾಗ ಸಹಜವಾಗಿಯೇ ಅಸಮಾನತೆ- ಹುಟ್ಟಿಕೊಳ್ಳುತ್ತದೆ. ಪುರುಷರ ತೋಳ್‌ಬಲವನ್ನು ಪೌರುಷವೆಂದು ವೈಭವೀಕರಿಸಿದ ಈ ವ್ಯವಸ್ಥೆಯಲ್ಲಿ ಸ್ತ್ರೀಯರ ಸಂತಾನ ಶಕ್ತಿಯನ್ನು ಸಾಧ್ಯತೆಯೆಂದು ಗುರುತಿಸಲಿಲ್ಲ. ಬದಲಾಗಿ ಅವಳೊಂದು

ಹೆರಿಗೆಯ ಯಂತ್ರವೆಂದು ತಿಳಿದುಕೊಂಡು ಶೋಷಣೆಗೆ ಪ್ರಾರಂಭಿಸಿದರು. ಜನಿಸಿ ಕಣ್ಣು ತೆರೆಯುವ ಹಂತದಲ್ಲಿಯೇ ಹೆಣ್ಣು-ಗಂಡೆಯ ಅಸಮಾನತೆಯ ಬೀಜ ಮೊಳಕೆಯೊಡೆಯುತ್ತದೆ. ಹೀಗಾಗಿ ಹೆಣ್ಣು-ಗಂಡು ಬೆಳೆಯುವ ಪರಿ ಭಿನ್ನವಾಗುತ್ತದೆ ಹೋಗುತ್ತದೆ.

ಜನಪದ ಸಾಹಿತ್ಯದಲ್ಲಿ ಕಾಣಿಸಿ ಕೊಂಡಿರುವ ಅನೇಕ ಗಾದೆ ಮಾತುಗಳಲ್ಲಿ ಹೆಣ್ಣಿನ ಬಗೆಗಿದ್ದ ಪರಿಕಲ್ಪನೆ ಸ್ಪಷ್ಟವಾಗುತ್ತದೆ.

"ಹೆಣ್ಣು ತಿರುಗಿ ಕೆಟ್ಟಳು...."

"ಹೆಣ್ಣಿನ ಬುದ್ಧಿ ಮೊಣಕಾಲು ಕೆಳಗೆ"

"ಹೆಣ್ಣು ಕೆಡಕಿನ ಮೂಲ"

"ಹೆಣ್ಣಾಗಿ ಹುಟ್ಟೋದಕಿಂತ ಮಣ್ಣಾಗಿ ಹುಟ್ಟೋದು ಲೇಸು"

"ಹೆಣ್ಣು ಮಾಯೆ....."

"ಹೆಣ್ಣು ಎಲ್ಲ ಕೆಡುಕುಗಳ ಮೂಲ"

ಇಂತಹ ನುಡಿಗಟ್ಟುಗಳು-ಗಾದೆ ಮಾತುಗಳು-ಪಡೆನುಡಿಗಳು ಹೆಣ್ಣಿನ ಅಸಮಾನತೆಗೆ ಮುಖ್ಯ ಕಾರಣವಾಗಿವೆ. ಹೆಣ್ಣನ್ನು ಭೋಗದ ವಸ್ತುವಾಗಿ ಮಾರಾಟದ ಸರಕಾಗಿ ಇಲ್ಲಿ ಕಾಣಿಸಲಾಗಿದೆ. ಎಲ್ಲಿ ಹೆಣ್ಣನ್ನು ಪೂಜಿಸುತ್ತಾರೋ ಅಲ್ಲಿ ದೇವತೆಗಳಿರುತ್ತಾರೆಂದು ಹೇಳಿದ ಮನು, ಮರುಗಳಿಗೆಗೇ "ನಸ್ತ್ರೀ ಸ್ವಾತಂತ್ರ ಮಾರ್ಹತಿ" ಎಂದು ಹೇಳಿದ. ಹೀಗೆ ಪುರುಷ ಪ್ರಧಾನ ವ್ಯವಸ್ಥೆಯ ಶೋಷಣೆ ಒಂದು ಕಡೆಯಾದರೆ, ಚಾತುರ್ವರ್ಣನ ವ್ಯವಸ್ಥೆಯ ಶೋಷಣೆ ಮತ್ತೊಂದು ಕಡೆಗೆ. ಈ ಎರಡೂ ರೀತಿಯ ಶೋಷಣೆಗೆ ಸಿಕ್ಕ ಹೆಣ್ಣು ಈ ದೇಶ ವ್ಯವಸ್ಥೆಯಲ್ಲಿ ನಲುಗಿ ಹೋಗಿದ್ದಾಳೆ.

ಉಳಿದವರಿಗೆಲ್ಲ ಒಂದೊಂದೇ ಕುಟುಂಬ, ಒಂದೊಂದೇ ಮನೆಗಳಿದ್ದರೆ, ಹೆಣ್ಣಿಗೆ ಎರಡು ರೀತಿಯ ಮನೆಗಳು. ಒಂದು ಅಪ್ಪನ ಮನೆ ಮತ್ತೊಂದು ಗಂಡನ ಮನೆ. ಅಲ್ಲಿಯೂ ಪುರುಷನೇ ಪ್ರಧಾನ- ಇಲ್ಲಿಯೂ ಪುರುಷನೇ ಪ್ರಧಾನ. ತವರು ಮನೆಯಲ್ಲಿ ಮಗಳಾಗಿ, ತಂಗಿಯಾಗಿ, ಅಕ್ಕನಾಗಿ, ಅತ್ತಿಗೆಯಾಗಿ ಬೆಳೆದು ನಿಂತ ಹೆಣ್ಣು ಗಂಡನ ಮನೆಯಲ್ಲಿ ಹೆಂಡತಿಯಾಗಿ, ಸೊಸೆಯಾಗಿ, ನಾದಿನಿಯಾಗಿ, ತಾಯಿಯಾಗಿ ಬೆಳೆದು ನಿಲ್ಲುತ್ತಾಳೆ. ಈ ಎಲ್ಲದರ ಹಿಂದೆ ಪುರುಷಾಧಿಪತ್ಯವೇ ಕಾಣಿಸುತ್ತದೆ.

"ಹುಟ್ಟೀದೆಣ್ಮಕ್ಕಳು ಮೆಟ್ಟಂಗಳಿಳಿವಾಗ
ಹೊಟ್ಟೇವಿ ಸಾಸುವೆ ತೆದ್ದುಂತೆ, ಹೆಣ್ಮಕ್ಕಳು
ಹುಟ್ಟಾರದೇಳು ಜನುಮಕ್ಕ"

ಎಂದು ತಾಯಿ ತನ್ನ ಮಗಳನ್ನು ಗಂಡನ ಮನೆಗೆ ಕಳಿಸುವಾಗಿ ಪರಿತಪಿಸುತ್ತಾಳೆ. ತಾಯಿಯನ್ನು ತೊರೆದು, ಮಗಳು ಗಂಡನ ಮನೆಗ್ಹೋಗುವಾಗ ಎಂತಹ ತಾಪವಾಗುತ್ತದೆಂದು ಹೇಳಲು "ಹೊಟ್ಟೇಲಿ ಸಾಉಸವೆ ತೇಯ್ದಂತೆ" ಎನ್ನುವ ಉಪಮೆ ಅತ್ಯಂತ ತೀವ್ರ ಪರಿಣಾಮವನ್ನುಂಟು ಮಾಡುತ್ತದೆ. ಹೀಗೆ ಗಂಡನ ಮನೆಗೆ ಹೋದ ಗರತಿ ಅಲ್ಲಿಯ ಶೋಷಣೆಯ ಚಕ್ರವ್ಯೂಹದಲ್ಲಿ ಸಿಲುಕಿ ತತ್ತರಿಸಿ ಹೋಗುತ್ತಾಳೆ. ಆಗ ಆಕೆಗೆ ಪ್ರತಿಭಟನೆ ಅನಿವಾರ್ಯವಾಗುತ್ತದೆ.

"ಸುಡುವ ಬೆಂಕೀಗೆ ಎಣ್ಣೇವ ಕೊಡನೊಯು
ಕುಂಬಳ ಕಾಯೊಯ್ದು ಕುಡಗೋಲಿಗೆ ಕೊಟ್ಟಂತೆ
ಎಂಥವರಿಗೆ ಕೊಟ್ಟೆ ಹಡದವ್ವ"

ಎಂದು ಸಂಕಟ ವ್ಯಕ್ತಪಡಿಸುತ್ತಾಳೆ. ನೋವನ್ನನುಭವಿಸುತ್ತಾಳೆ. ಈ ರೀತಿಯ ರೋಧನದ ಯಾತನೆಯನ್ನು ಜನಪದ ಕಾವ್ಯ ತನ್ನೊಡಲೊಳಗಿಟ್ಟುಕೊಂಡಿದೆ. ವಿದ್ಯಾವಂತ ಮಹಿಳೆಯ ಹಾಗೆ ಜನಪದ ಮಹಿಳೆ ಚಿಂತನಾಶೀಲಳಲ್ಲ. ಗಂಡನೆಂಬುವನು ಆಕೆಗೆ ಗಾರೆಯ ಮುಳ್ಳಿನಂತೆ ಕಾಣುತ್ತಾನೆ. ಮಾವ-ಮೈದುನರೆಲ್ಲ ಕ್ರೂರ ಪ್ರಾಣಿಗಳಂತೆ ಕಾಣಿಸುತ್ತವೆ. ಅಬಲೆಯಾದ ಆ ಹೆಣ್ಣು ಜೀವ ಅಲ್ಲಿ ಒಂಟಿಯಾಗಿ ಅನುಭವಿಸುವ ಯಾತನೆ ತೀವ್ರತರವಾದುದು. ಇಂತಹ ಸಂದರ್ಭಗಳಲ್ಲಿ ನೊಂದು-ನೊಂದು ನೋವು ತೀವ್ರವಾದಾಗ ಅಲ್ಲಲ್ಲಿ ಪ್ರತಿಭಟನೆಯ ಗೆರೆಗಳು ಕಾಣಿಸಿಕೊಳ್ಳುತ್ತವೆ. ಧೈರ್ಯದಿಂದ ಆಕೆ ಎದ್ದು ನಿಂತಾಗ ಪ್ರತಿಭಟನೆಯ ಮಾರ್ಗಗಳು ಸಹಜವಾಗಿಯೇ ಕಾಣಿಸಿಕೊಳ್ಳುತ್ತವೆ.

ಇಂತಹ ಪ್ರತಿಭಟನೆಯ ನೆಲೆಗಳನ್ನು ಈ ಪ್ರಬಂಧದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಉತ್ತರದೇವಿ ಹಾಡು, ಈರೋಬಿ ಕಥನ ಕವನ, ಸಿರಿ ಮಹಾಕಾವ್ಯ, ಮಂಜಿ ಹಾಡಿದ ಮಹಾಭಾರತ, ಮಂಟೇಸ್ವಾಮಿ ಕಾವ್ಯ, ಸಂಕಮ್ಮನ ಸಾಲು ಮತ್ತು ಗ್ರಾಮ ದೇವತೆಗಳು ಇಲ್ಲೆಲ್ಲಾ ಮಹಿಳಾ ಪ್ರತಿಭಟನೆಯ ಪ್ರಸಂಗಗಳು ಕಾಣಿಸಿಕೊಂಡಿವೆ. ಈ ಎಲ್ಲಾ ಪಠ್ಯಗಳನ್ನು ಇಲ್ಲಿ ವಿವರವಾಗಿ ವಿಶ್ಲೇಷಿದೆ. ಸಾಂದರ್ಭಿಕ ಪ್ರಸಂಗಗಳನ್ನೆತ್ತಿಕೊಂಡು, ಮಹಿಳಾ ಪ್ರತಿಭಟನೆಯ ಆಶಯಗಳನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

"ನೀರಿಗೆ ಹೋದ ಸೊಸೆಯೇ ಇಟ್ಟೊತ್ತು ಹೆಂಗಾಯ್ತು
ಯಾರಲ್ಲಿ ನಿನ್ನ ತಡದರು?"

ಎಂದು ಅತ್ತೆ ಪ್ರಶ್ನಿಸಿದಾಗ, ಸೊಸೆಯನ್ನು ಸಂಶಯದಿಂದ ನೋಡಿದಾಗ, ಅಳುತ್ತ ಕುಳಿತುಕೊಳ್ಳುತ್ತಿದ್ದ ಜನಪದ ಮಹಿಳೆ ಕ್ರಮೇಣ ಧೈರ್ಯ ತಂದು ಕೊಳ್ಳುತ್ತಾಳೆ. ಜೀವನಾನುಭವದಿಂದ ಕಲಿತ ಪಾಠದಿಂದ ತಿರುಗಿ ಉತ್ತರ ಕೊಡುತ್ತಾಳೆ.

"ನಿಮ್ಮಂಗಿರುವಂಗೆ ನೀವೆ ನೀರಿಗ್ಹೋಗ್ವಂಗೆ
ನಿಮ್ಮ ಯಾರಲ್ಲಿ ತಡೆದೀರು ಅತ್ಯಮ್ಮ
ಗಿಣೆಮಿಂದು ನೀರ ಕಣಕಿತ್ತೆ" ಎಂದು

ಎದುರುತ್ತರ ಕೊಡುತ್ತಾಳೆ. ನೀವೂ ಸೊಸೆಯಾಗಿದ್ದಿರಿ. ನೀವೂ ನೀರು ತಂದಿರಿ ಆಗ ನಿಮ್ಮನ್ಯಾರು ತಡೆದಿದ್ದರು? ಎಂದು ಸೊಸೆ. ಅತ್ತೆಯನ್ನು ಕೇಳುವ ಈ ಪ್ರಶ್ನೆ. ಪ್ರಥಮ ಪ್ರತಿಭಟನೆಯಾಗಿ ಹೊರಹೊಮ್ಮುತ್ತದೆ. ಆಗ ಅತ್ತೆ ಸುಮ್ಮನೆ ಕೂಡಬೇಕಾಗುತ್ತದೆ. ಹೀಗೆ ಜನಪದ ಮಹಿಳೆ ಸ್ವತಂತ್ರವಾಗಿ ಬೆಳೆದು ನಿಂತು ಪ್ರತಿಭಟನೆ ಮಾಡಿದ ಸಂದರ್ಭಗಳು ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ಇಂತಹ ಪರಂಪರೆಗಳನ್ನು ಗುರುತಿಸಿ ಅಧ್ಯಯನ ಮಾಡುವುದು ಇಂದಿನ ಅಗತ್ಯವಾಗಿದೆ.

ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆಯ ಅಂಶಗಳು ಕಾಣದೊರಕುವುದು ಇಲ್ಲಿನ ಅಧ್ಯಯನದ ವೈಶಿಷ್ಟ್ಯವಾಗಿದೆ.

ಹೆಣ್ಣಿದ್ದ ಮನೆಗೆ ಕನ್ನಡಿ ಯಾತಕ್ಕೆ
ಹೆಣ್ಣು ಸಣ್ಣವಳು ಒಳಗಿರಲು। ನನ್ನಮಗಳು
ಕನ್ನಡಿಹಂಗ ಹೊಳೆವಳು.

ಎಂದು ತಾಯಿ ತನ್ನ ಹೆಣ್ಣು ಮಗುವಿನ ಮೇಲೆ ಇರುವ ಕರುಳಬಳ್ಳಿಯ ಸಂಬಂಧವನ್ನು ಹೊರಹಾಕಿದ್ದಾಳೆ. ಹೆಣ್ಣು ಮಗುವಿಗೆ ವಿಶೇಷ ಪ್ರೀತಿ ಕಾಳಜಿ ಅಂತಃಕರಣ ಇರುವುದು ನಮಗೆ ಸ್ಪಷ್ಟವಾಗಿ ಕಂಡುಬರುತ್ತದೆ. ಹೆಣ್ಣು ಕನ್ನಡ ಸಂಸ್ಕೃತಿಯಲ್ಲಿಯೇ ಕನ್ನಡಿಯಾಗಿದ್ದಾಳೆ. ಅವಳಿಂದಲೇ ಎಲ್ಲಾ ನಮಗೆ ದೊರಕುತ್ತದೆ. ತವರುಮನೆ ಗಂಡನ ಮನೆ ಎರಡು ಮನೆತನಗಳ ಆದರ್ಶ ಕೊಂಡಿಯಾಗಿ ಎರಡು ಮನೆತನಗಳ ಸಂಸ್ಕೃತಿಯ ಆಧಾರ ಸ್ತಂಭವಾಗಿ ಕಂಡುಬರುತ್ತಾಳೆ. ಹೀಗಾಗಿ ಹೊರ ಒಳ ಮನೆಗೂ ಶೋಭೆ ತರುವ ಗುಣ ಆಕೆಯಲ್ಲಿದೆ ಎಂದಿದ್ದಾರೆ.

ನಮ್ಮ ಜನಪದದ ಮಾಹಾಭಾರತ. ರಾಮಾಯಣ. ಮಾಹಾಕಾವ್ಯಗಳು ಸಹಿತ ಶಿಷ್ಟ ಕಾವ್ಯಗಳಗಿಂತ ಭಿನ್ನವಾದುದ್ದನ್ನೆಲ್ಲ ಈ ಜನಪದ ಹಾಗೂ ಶಿಷ್ಟಕಾವ್ಯದ ಮಹಿಳೆಯ ಚಿತ್ರಣವು ಕೂಡ ಸಮಾನವಾಗಿ ವ್ಯಕ್ತವಾಗಿದೆ. ದ್ರೌಪದಿ. ಮಂಡೋದರಿ. ಅಹಲ್ಯೆ. ಸೀತೆ. ಶಬರಿ ಮುಂತಾದ ಪಾತ್ರಗಳು ಸ್ತ್ರೀ ಕೇಂದ್ರಿತ ಪಾತ್ರಗಳು ಇದರಲ್ಲಿ ವಸ್ತು ವೈಶಿಷ್ಟ್ಯತೆ ಹಾಗೂ ವೈವಿಧ್ಯತೆಯಿಂದ ತನ್ನ ಮೂಲ ಗುಣವನ್ನು ಕಳೆದುಕೊಳ್ಳುತ್ತಿದೆ. ಸೀತೆಯಂತಹ ಪಾತ್ರಳು ಮೃದು ಸ್ವಭಾವವನ್ನು ಪ್ರತಿಪಾದಿಸಿದರೆ. ಮಾಹಾಭಾರತದ ದ್ರೌಪದಿ ಸಿಟ್ಟು. ರೋಷ

ಅನೇಕಗಳನ್ನು ಪ್ರತಿನಿದಿಸುವ ಹಗೆ ಹೊರಬಂದಿವೆ ಕೆಚ್ಚು, ರೊಚ್ಚು, ಸಿಟ್ಟು, ಆವೇಶಗಳ ಕೇವಲ ಆವೇಶಕ್ಕಾಗಿಯೇ ಹೊರಬರದೆ ಅವು ಗಟ್ಟನೆಲೆಯಲ್ಲಿ ಪ್ರತಿಪಾದಿಸುವ ಅಂಶಗಳಾಗಿವೆ. ವೈಚಾರಿಕಕ್ಕೆ ಕ್ರಾಂತಿಯನ್ನುಂಟುಮಾಡುತ್ತವೆ. ಇಂತಹ ದ್ರೌಪದಿ, ಸೀತೆ, ಶಬರಿ ಅಹಲ್ಯೆಯರ ವಿಚಾರ ಧಾರೆಗಳು ಮಹಿಳಾ ಅಧ್ಯಯನದಲ್ಲಿ ಅದರಲ್ಲೂ ವಿಶೇಷವಾಗಿ ಜನಪದ ಮಹಿಳೆಗೆ ವಿಶೇಷವಾಗಿ ಕಂಡು ಬರುತ್ತಿವೆ. ಜನಪದ ಮಹಿಳೆ ಸಂಪೂರ್ಣವಾಗಿ ಅದನ್ನು ಒಪ್ಪಿಕೊಂಡು ಬಿಡುತ್ತಾಳೆ. ತನ್ನೊಳಗೆ ತಾನು ಬಂದು ಹೋಗುವಕಾಲ ಹತ್ತಿರವಾಗಿ ಬರುತ್ತಿವೆ ಇನ್ನು ಜನಪದ ತಾಯಂದಿರೆಲ್ಲರೂ ಸಂಪೂರ್ಣವಾಗಿ ಒಪ್ಪಿಕೊಂಡು ಹಾಡಿ ಹರಿಸುತ್ತಾರೆ. ಕೆಚ್ಚು ಹೋರಾಟ ಪ್ರತಿಭಟನೆಯನ್ನು ಕಂಡು ಜನಪದರು ದ್ರೌಪದಿಯಂತಹ ಮಗಳು ನಮಗೆ ಹುಟ್ಟಲಿ ಅಂತವಳು ನಮಗೆ ಉಳಿಯಬೇಕೆಂಬ ಸದಾಶಯವನ್ನು ಹೊಂದಲಾಗಿದೆ.

ಹತ್ತು ಗಂಡು ಹಡೆದರು ಮತ್ತೆ ಬಂಜೆನ್ನುವರು
ದಟ್ಟಿ ಉಡುವ ದ್ರೌಪದಿ ಹುಟ್ಟಿದರೆ ತಂಗ್ಯಮ್ಮಾ
ಬಂಜೆಂಬ ಶಬ್ದವಾ ಅಳಿದಾವೋ

ಎಂಬ ಸದಾಶಯವನ್ನು ತಾಯಿ ಬಯಸುತ್ತಾಳೆ ಹತ್ತು ಹಡೆದರೂ ಸಹಿತ ಬಂಜೆಯಂಬ ಪದ ನಮಗೆ ಬಿಟ್ಟಿಲ್ಲ ನಾವು ಅವನೆಲ್ಲ ಬಿಟ್ಟು ದ್ರೌಪದಿಯಂತಹ ಒಬ್ಬ ಮಗಳು ಹುಟ್ಟಿದರೆ ಸಾಕು ಬಂಜೆಂಬ ಶಬ್ದ ಹರಿದುಹೋಗುತ್ತದೆ. ಅದಕ್ಕೆ ನಾವೆಲ್ಲ ಪ್ರಯತ್ನಿಸೋಣವೆಂಬ ಸದಾಶಯವನ್ನೇ ಹೊಂದಿದರು ದ್ರೌಪದಿಯ ಅಂಶಗಳು ಶಕ್ತಿ ಸಾಮರ್ಥ್ಯಗಳು ಇಲ್ಲಿ ದಾಖಲಾಗಿ ಅವು ಸ್ತ್ರೀಕೇಂದ್ರಿತ ಅಂಶಗಳಾಗಿ ಹೊರಬಂದಿವೆ. ಪ್ರತಿಭಟನೆ ಜನಪದ ಸಾಹಿತ್ಯದಲ್ಲಿ ಕಡಿಮೆ ಇದ್ದರೂ ಸಹ ಅವರು ಹೇಳುವ ವಿಚಾರಗಳಲ್ಲಿ ಕ್ರಾಂತಿಯ ನುಡಿಗಳು ಕಾಣಸಿಗುತ್ತಿವೆ.

ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ ಎಂಬ ನಿಜಸ್ಥಿತಿ ಉಂಟಾದರೂ ಅದನ್ನು ಕಂಡು 'ಹೆಣ್ಣು ಹಡಿಯಲಿ ಬ್ಯಾಡ ಹೆರವರಿಗೆ ಕೊಡಬ್ಯಾಡ' ಎಂಬ ಆಶಯ ಇಡೀ ವ್ಯವಸ್ಥೆ ಬಲಿಯಾದ, ಬಲಿಯಾಗುತ್ತಿರುವ ಸ್ಥಿತಿ ಕಂಡು ಜನಪದರು ಸಂಪೂರ್ಣವಾಗಿ ಹೆಣ್ಣನ್ನೇ ತಿರಸ್ಕರಿಸಿದ್ದಾರೆ. ಇದನ್ನು ಹೆಣ್ಣೇ ಪ್ರತಿಭಟಿಸಿ ತಾನು ನೋವು ಶೋಷಣೆ ಪ್ರತಿಭಟನೆ ಪ್ರತಿರೋಧವು ಉಂಟಾದರು ಸಹಿತ ಹೆಣ್ಣು ಹುಟ್ಟುವುದೇ ಅಪರೂಪ ಹೆಣ್ಣಿನಿಂದಲೇ ಪ್ರಗತಿ ಚಲನಾಶೀಲ ಗುಣ ಹೊಂದಿದೆ ಎಂಬ ಸದಾಶಯವನ್ನು ಸಹಿತ ಗರತಿ, ತ್ರಿಪದಿಯ ಮೂಲಕ ಹೊರಹಾಕುತ್ತಾಳೆ. ಹೆಣ್ಣು ಹುಟ್ಟು ಪಡೆಯುವುದು ಹೆಮ್ಮೆವಂತಿಕೆ ಸಂತೋಷದ

ಸಂಗತಿಯಾಗಿದೆ. ಆ ಕಾರಣದಿಂದಾಗಿಯೇ ಮಹಿಳೆ ಅದರ್ಶವಾಗಿ ಬಾಳಬೇಕೆಂಬ ಅಂಶವನ್ನು ಹೆಮ್ಮ ಪಟ್ಟುಕೊಂಡು ತನ್ನ ಮೂಲಕ ಮಹಿಳಾ ಸಂವೇದನಗಳಿಗೆ ಹೊಸ ಅರ್ಥವನ್ನು ಕೊಡಲು ಮುಂದೆ ಬಂದ ರೀತಿಯದಾಗಿದೆ.

ಹಚ್ಚಿಕೊಂಡವ್ವಗ ಚೊಚ್ಚಿಲು ಮಗಳಾದೆ
ಬಿಟ್ಟಾಡಿಕೊಳ್ಳೂವ ವೈರೀಯ ಮನಿಮುಂದೆ
ಬಿಚ್ಚು ಗತ್ತ್ಯಾಗಿ ಹೊಳೆದೇನ.

ಎಂಬ ಧೃಡವಾದ ಸಂಕಲ್ಪ ಹೊಂದಿದ ಮಹಿಳೆ ತನ್ನ ಮೂಲ ಗುಣವನ್ನು ಕಳೆದುಕೊಳ್ಳದೇ ಹೊಸ ಬಗೆಯಲ್ಲಿ ಹೇಳುವ ರೀತಿ ಅನನ್ಯತೆಯಿಂದ ಕೂಡಿದೆ. ಆ ಕಾರಣದಿಂದಾಗಿ ಮೂಲ ಸಂಸ್ಕೃತಿ ನೆಲೆಗಳಲ್ಲಿ ಹೊಸ ಬೆಳವಣಿಗೆ ಹೊಂದಿಸಿ ಹೆಣ್ಣಿಗೆ ಹುಟ್ಟಿದೆ ನನ್ನ ತಾಯಿಯ ವಾತ್ಸಲ್ಯದ ಕುಡಿಯಾದ್ದರಿಂದ ಚೊಚ್ಚಲ ಮಗಳಾಗಿ ಬಿಟ್ಟು ಆಡಿಕೊಳ್ಳುವ ಜನರನ್ನು ವೈರಿಗಳ ಮುಂದೆ ಹೊಳೆದ ಬಿಚ್ಚುಗತ್ತ್ಯಾಗಿ ಹೊಳೆಯುವ ಬಗೆಯನ್ನು ಸಂಪೂರ್ಣವಾಗಿ ವಿವರಿಸಿದ್ದಾಳೆ. ಇಲ್ಲಿಯೇ ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆಯ ಅಂಶಗಳನ್ನು ಗುರುತಿಸಿಕೊಳ್ಳಬೇಕಾಗಿದೆ.

ಜನಪದ ಸಾಹಿತ್ಯದಲ್ಲಿಯೇ ಬಹು ಬಗೆಯ ಅಂಶಗಳು ನಮಗೆ ಹೊಸತು ಅರ್ಥವನ್ನು ಕೊಡುತ್ತವೆ. ಸಮಾಜದ ವ್ಯವಸ್ಥೆಯಲ್ಲಿ ಗಂಡು-ಹೆಣ್ಣಿಗೆ ಸಮಾನವಾದ ಸ್ಥಾನ ಮಾನಗಳು ದೊರಕಬೇಕು. ಇರದಿದ್ದರೆ ಅಧೋಗತಿಗೆ ಇಳಿಯಬೇಕಾದ ಅನಿವಾರ್ಯತೆಯಿದೆ. ಮಹಿಳೆ ತನ್ನ ತವರು ಮನೆಯಲ್ಲಿ ಸ್ವೇಚ್ಛಾಚಾರದಿಂದ ಹಾರಾಡಿ-ಹೋರಾಡಿ ಹೊರಬಂದಿದ್ದಾಳೆ. ಆದರೆ ಅದೇ ಮಹಿಳೆ ತವರು ಮನೆ ಬಿಟ್ಟು ಗಂಡನ ಮನೆ ಸೇರಿಕೊಂಡಾಗ ಹತ್ತು ಹಲವು ವಿರುದ್ಧ ಸಂಗತಿಗಳು ತಲೆದೂರುತ್ತವೆ. ಗಂಡನ ಮನೆಯಲ್ಲಿ ಒಂದೇ ಅಲ್ಲ ನೂರಾರು ಅಂಶಗಳು ಎದುರಾಗುತ್ತವೆ. ಮುಳ್ಳಿನ ಹಾಸಿಗೆಯ ಮೇಲೆ ನಡೆದಾಡಬೇಕಾದ ಅನಿವಾರ್ಯವಾದ ಪ್ರಸಂಗ ಎದುರಾಗುತ್ತದೆ. ಅತ್ತೆ, ಮಾವ, ನಾದಿನಿ, ನೆಗೆಣಿ, ಸರ್ವರೆಲ್ಲರು ಆಕೆಯನ್ನು ಅಪರಾಧಿಯಂಬಂತೆ ನೋಡುತ್ತಾರೆ. ಆಕೆಯ ಗುಣ ನಡುವಳಿಕೆಗಳನ್ನು ಕುರಿತು ನಿಂತಲ್ಲೆ ತಿಳಿದುಕೊಳ್ಳಲು ಹೋಗುತ್ತಾರೆ.

ಒಂದು ಗಳಿಗೆಯಲ್ಲಿ ಗಂಡನ ಮನೆಯಲ್ಲಿ ಆಕೆಗೆ ಕಿರುಕುಳ ನೀಡುವುದು, ಹೆದರಿಸುವುದು, ಹಲವಾರು ಸಮಸ್ಯೆಗಳನ್ನು ಎತ್ತಿ ಹೇಳುತ್ತಾರೆ. ಕಂದನಿಗೆ ಮೊಲೆಯನ್ನು ಕೊಡದಂತೆ ದೂರತಳ್ಳುವರು ಪ್ರತಿಯೊಂದು ಹಂತದಲ್ಲೂ ಸಹಿತ ಗಂಡ-ಹೆಂಡತಿ

ಮಕ್ಕಳನ್ನು ಸಹ ಬೇರೆ ಬೇರೆ ಮಾಡಿಸುತ್ತಾರೆ. ಬೇರ್ಪಡಿಸುತ್ತಾರೆ. ಬೇರ್ಪಡಿಸುವ ಮೂಲಕ ಅವಳಲ್ಲಿರುವ ಕುಂದು ಕೊರತೆ ಸಮಸ್ಯೆಗಳನ್ನು ಪ್ರತಿನಿತ್ಯ ಹೊಸ ಹೊಸ ಅಂಶಗಳನ್ನು ಕ್ರೋಢಿಕರಿಸಿ ಹೊರಹಾಕುತ್ತರೆ. ಮಹಿಳೆ ತನ್ನ ನೋವು ನಲಿವುಗಳನ್ನು ಹೇಳಿಕೊಳ್ಳಲು ಅಭಿವ್ಯಕ್ತಗೊಳಿಸಲು ಸಾಧ್ಯವಾಗದೇ ಹಾಗೆ ನೆಲೆ ನಿಂತುಕೊಂಡ ಹತ್ತಾರು ಸಂಗತಿಗಳನ್ನು ಹೊರಹಾಕಿ ಆಕೆಯನ್ನು ಸಂದಿಗ್ಧ ಪರಿಸ್ಥಿತಿಯಲ್ಲಿ ಉಂಟು ಮಾಡುವಂತೆ ನಿಲ್ಲುತ್ತಾರೆ.

ಅಂಜಿಕೆ ತೋರಿದರೆ ಅಂಜುವರ ಮಗಳಲ್ಲ
ಮುಂಜಾನದಾಗ ಹುಲಿ. ಕರಡಿ. ತೋರಿದರೆ
ಅಂಜಿ ತಿರುಗುವವರ ಸೊಸಿಯಲ್ಲ.

ಅವರು ಕೊಡುವ ಪ್ರತಿಭಟನೆ. ಹಿಂಸೆ. ನೋವು ಶೋಷಣೆ. ಎಲ್ಲವನ್ನು ಕಂಡು ಪ್ರತಿಭಟಿಸುತ್ತಾಳೆ ಸಿಡಿದು ನುಡಿಯುತ್ತಾಳೆ ಇಂತಹ ಪ್ರತಿಭಟನೆಯ ಅಂಶಗಳು ಅಪರೂಪವಾಗಿ ಕಂಡುಬರುತ್ತಿವೆ. ಇಂತಹ ನುಡಿಗಳು ಒಂದೇ. ಎರಡೇ. ಜನಪದ ಸಾಹಿತ್ಯದಲ್ಲಿ ಹೊರಬಂದರೂ ಅತ್ತ ಸರ್ವಕಾಲಿಕ ಸತ್ಯವನ್ನು ಪ್ರತಿನಿಧಿಸುತ್ತವೆ. ಇಂತಹ ಮಾತುಗಳಲ್ಲಿ ಪ್ರತಿಭಟನಾ ಮನೋಧರ್ಮ ಅಡಕವಾಗಿರುವುದು ಸೂಕ್ತವಾಗಿದೆ. ಪುರುಷ ಪ್ರಧಾನವಾದ ಸಂಸ್ಕೃತಿಯ ನೆಲೆಗಳಲ್ಲಿಯೆ ಬಹು ಬಗೆಯ ಅಂಶಗಳು ಪ್ರತಿಪಾದನೆ ಮಾಡುವ ರೀತಿಗಳನ್ನು ಕಂಡರೆ ಅವುಗಳಲ್ಲಿ ನಮ್ಮ ಮನಸ್ಥಿತಿಯನ್ನು ಕಾಣುತ್ತಿವೆ. ಪಿತೃ ಪ್ರಧಾನ ನೆಲೆಯ ಸಂಸ್ಕೃತಿಗೂ ಮಾತೃ ಪ್ರಧಾನ ಸಂಸ್ಕೃತಿಯ ನೆಲೆಗಳು ಸಹಿತ ಹೊಸ ಅನ್ವೇಷಣೆಯಿಂದ ಕೂಡಿವೆ. ಇಲ್ಲಿಯೇ ಮಾತೃ ಪ್ರಧಾನ ಪಿತೃ ಪ್ರಧಾನ ಸಂಸ್ಕೃತಿಗಳಲ್ಲಿ ವಸ್ತು–ವಿಷಯಗಳನ್ನು ಒಂದೇ ಆದರೂ ಅವು ತನ್ನ ಮೂಲ ಸಾಂಸ್ಕೃತಿಕ ಆಯಾಮಗಳಲ್ಲಿ ತನ್ನ ತನವನ್ನು ಉಳಿಸಿಕೊಂಡಿದೆ. ಇವುಗಳಿಗೆ ಪೂರಕ ಹಾಗೂ ಪರ್ಯಾಯವಾದ ಸಾಂಸ್ಕೃತಿಕ ನೆಲೆಗಳನ್ನು ಗುರುತಿಸಲು ಶಕ್ಯವಾಗಿದೆ. ಮಾತೃ ಪ್ರಧಾನ ಸಂಸ್ಕೃತಿಯಲ್ಲಿ ಪ್ರಮುಖವಾದ ಅಂಶಗಳು ಬಹು ಮಹತ್ತರವಾದ ಸ್ಥಾನವನ್ನು ಹೊಂದಿವೆ. ಇಲ್ಲಿ ಪ್ರತಿಭಟನೆ ಮನೋಭಾವ ನೋಡಿದರೆ ಗೊತ್ತಾಗುತ್ತದೆ. ಹೆಣ್ಣುಮಗಳನ್ನು ಎತ್ತಿ ಹೇಳುವ ವಿಚಾರಧಾರೆಗಳು ಸಹ ಪ್ರಸ್ತುತವಾಗುತ್ತವೆ. ಇಲ್ಲಿಯ ಮಗು. ಗಂಡೇ ಸಂಪೂರ್ಣ ಸಹಕಾರವಾಗುವುದಿಲ್ಲ. ಗಂಡೇ ಪ್ರದತಿ ಸಾಧ್ಯದ ಅಂಶ ತಲುಪುತ್ತಾನೆ ಎಂಬ ಸದಾಶಯಗಳು ಹೊರ ಬಂದಿವೆ.

ಗಂಡು ಸಂತಾನ ಒಂಬತ್ತು ಕೊಡಿ ಸ್ವಾಮಿ
ಒಂಬತ್ತೇಳಿಗೂ ಕಳಸಮ ಕೈ ಮುಗವರ್
ರಂಬಿ ಒಬ್ಬಳನ್ನು ಕೊಡಿಸ್ವಾಮಿ

ಎಂದು ಗಹನವಾಗಿ ಬೇಡಿಕೊಳ್ಳುತ್ತಾಳೆ. ಇದರ ಮೂಲಕ ಸಂಪಿಗೆಯಂತಹ ಮಹಿಳೆಯು ತೇರನ್ನು ಎಳೆಯುವ ಹರಕೆಯನ್ನು ಹೊರುತ್ತಾಳೆ. ಚಿನ್ನದ ಕದಿರನಂಗೆ ಮಗಳನ್ನು ಸಾಕಿ ಸಲುಹುವುದನ್ನು ನೋಡಬೇಕಾಗಿದೆ. ಮಹಿಳೆ ಇಂತಹ ಕಡೆಗಳಲ್ಲಿ ತನ್ನ ಆತ್ಮವಿಶ್ವಾಸವನ್ನು ಬೆಳೆಸಬೇಕಾದ ಅನಿವಾರ್ಯತೆ ಇದೆ. ಸ್ವಾಭಿಮಾನದ ಸಂಕೇತ ಹೊಂದಿ ಗೌರವವನ್ನು ಕುಟುಂಬದಲ್ಲಿ ಬೆಳೆಯಬೇಕು ಎಂಬ ಸದಾಶಯವನ್ನು ಜನಪದರು ಹೊಂದಿದ್ದಾರೆ. ತನ್ನ ಒಡಲ ಕುಡಿಯಾಗಿ ಬೆಳೆದ ಮಗಳು ಕರುಳು ಬಳ್ಳಿಯ ಸಂಬಂಧವನ್ನು ಅಭೂತಪೂರ್ವವಾಗಿ ಒಪ್ಪಿಕೊಳ್ಳುತ್ತಾಳೆ. ಗಂಡನ ಮನೆಗೆ ತಾಯಿ ಮಗಳನ್ನು ಕಳುಹಿಸುವಾಗ ಹೊತ್ತು-ಹೆತ್ತು, ತೆತ್ತು ಒಂದು ಹಂತಕ್ಕೆ ಬರುವವರೆಗೆ ಸಾಕಿದ್ದಾಳೆ. ಆ ಎಲ್ಲಾ ನೋವು, ನಲಿವು, ಸಂತಸ, ಆತ್ಮೀಯತೆ ಪ್ರೀತಿಯ ಅಂಶಗಳು ಸಹ ಅಗತ್ಯವಾಗಿ ಕಂಡು ಬರುತ್ತವೆ. ತಾಯಿ ತುಂಬು ಮನಸ್ಸಿನಿಂದ ಹಾರ್ದಿಕವಾಗಿ ಬಿಳ್ಕೋಡುವಾಗಲೂ ಸಹಿತ ಅತ್ತೆಯ ಮನೆಯಲ್ಲಿ ಮುತ್ತಾಗಿ ಇರಬೇಕು ಎಂದು ಆಶಿಸುತ್ತಾಳೆ. ಅತ್ತೆಯ ಮನೆಯಲ್ಲಿ ಹೋದಾಗ ಮನೆತನಕ್ಕೆ ಗೌರವ ತರಬೇಕು. ಆತ್ಮೀಯ ಸಂಬಂಧ ಹೊಂದಬೇಕು ಪ್ರೀತಿಯ ಧಾರೆಯೆರೆಯಬೇಕು ಎಂದು ಹಾರೈಸುತ್ತಾಳೆ. ಮುತ್ತಾಗಿ ಬೆಳೆಯಬೇಕು ಎಲ್ಲರನ್ನೂ ಪ್ರೀತಿಯಿಂದ ಕಾಣಬೇಕು ಎಂಬ ಸದಾಶಯ ಹೊಂದುತ್ತಾಳೆ.

"ಗಂಜಿಯ ಕುಡಿದರು ಗಂಡನ ಮನೆ ಲೇಸು" ಗಂಜಿ ಕುಡಿದರು ಪರವಾಗಿಲ್ಲ ಗಂಡನ ಮನೆಯೇ ಲೇಸಾಗಿರಬೇಕು ನಾವು ತವರುಮನೆಯಲ್ಲಿ ಎಷ್ಟೇ ಐಶ್ವರ್ಯ ಸಂಪತ್ತು ಇದ್ದರು ಅವನ್ನೆಲ್ಲ ದೂರೀಕರಿಸಿ ಬಾಳಬೇಕು. ಗಂಡನ ಮನೆಯಹಿತಕ್ಕಿಂತ ಬೇರಾವದು ಮನೆ ನಮಗೆ ಬೇಡ ಎಂಬ ಅಂಶವನ್ನು ಅವರು ಎತ್ತಿ ಹೇಳುತ್ತಾರೆ. ಏನೇ ಕಷ್ಟ, ನಷ್ಟ, ನೋವು, ನಲಿವುಗಳು ಇದ್ದರು ನಾವು ಅವಗಳನ್ನೇಲ್ಲಾ ದೂರ ತಳ್ಳಿ ಗಂಡನ ಮನೆ ಹಿತವೆ ಮುಖ್ಯ ಬೇರ್ಯಾವದು ಕೂಡಾ ಬೇಡವೆಂದು ಹೇಳಿದ್ದಾರೆ. ಮನದಲ್ಲಿ ಮರುಗದೇ ಸಂತೋಷದಿಂದ ಬಾಳಬೇಕೆಂದು ಕರೆ ಕೊಡುತ್ತಾಳೆ. ಪತಿಯೇ ದೇವರು ಅದನ್ನು ಬಿಟ್ಟು ಬೇರೆಯಿಲ್ಲವೆನ್ನುವ ಮಾತು ಒಪ್ಪಿಕೊಳ್ಳಬೇಕಾಗಿದೆ. ಪತಿಯನ್ನು ಆತ್ಮಿಯವಾಗಿ ಗೌರವಿಸಬೇಕು ಆದರೆ ಪತಿಯೇ ದೇವರು ಎಂಬ ವಾದವನ್ನು ಅವನು ಮಾಡುವುದಿಲ್ಲ. ಪತಿ ದೇವರೆಂದು ಬೋಧಿಸಲು ಜನಪದ ಮಹಿಳೆ ಬೋಧನೆಗೆ ತೊಡಗುವುದಿಲ್ಲವೆಂಬುವುದೇ ಇಲ್ಲಿ ಪ್ರತಿಭಟನೆಯಾಗಿದೆ. ಹಾಗೇನಾದರೂ ಧೈರ್ಯದಿಂದ ಬಾಳಬೇಕಾದರೆ ಗಂಡನ ಮನೆಯಲ್ಲಿಯೇ ಬಾಳಬೇಕು. ಬಾಳನ್ನು ಕಾಣಬೇಕಾದರೆ ಅಲ್ಲಿ ಏನಾದರು ತೊಂದರೆಯಾದರೆ ಆಗ ಮಾತ್ರ ಅಂದರೆ ಕೊನೆಯ ಹಂತದಲ್ಲಿ ಮಹಿಳೆ ತವರಿಗೆ

ಬರಬೇಕು. ಇರದಿದ್ದರೆ ಬೇಡವೆಂಬ ಮಾತನ್ನು ತಾಯಿ ಅತ್ಯಂತ ಧೈರ್ಯದಿಂದ ಮಗಳಿಗೆ ಹೇಳಿಕಳಸುತ್ತಾಳೆ. ಆ ತಾಯಿ ಧೈರ್ಯವೇ ಮುಖ್ಯವಾಗುತ್ತದೆ.

"ಅಂದ ಮಾತನ್ನು ಬಂದ್ಹೇಳು ನನ್ಮಗಳೆ
ಆಡದ್ಮಾತನ್ನು ಬಂದ್ಹೇಳು"

ಎಂದು ಹಾರೈಸಿ ಬೆಂಬಲಸಿಸಿ ಆಕೆಯ ಪ್ರತಿನಿತ್ಯದ ಕೆಲಸ ಕಾರ್ಯಗಳಲ್ಲಿ ತೊಡಗಬೇಕೆಂಬುದಲ್ಲಿ ಮುಖ್ಯ ಕಾಳಜಿಯಾಗುತ್ತದೆ. ಮಗಳಿಗೇನಾದರು ತೊಂದರೆಯಾದರು ನಾನು ನೋಡಿಕೊಳ್ಳಲು ತಯಾರಿದ್ದೇನೆ ಎಂಬ ಆಶಯವನ್ನು ಎತ್ತಿ ಹೇಳಲು ಭರವಸೆ ಕೊಡುತ್ತಾಳೆ. ಪ್ರತಿಭಟನೆಯ ಮನೋಧರ್ಮ ಮಗಳಲ್ಲೂ ಬೆಳೆಸುತ್ತಾಳೆ. ಮಗಳ ಬಗ್ಗೆ ತಾಯಿಗೆ ಅಪಾರ ಪ್ರೀತಿ ಕರುಳಬಳ್ಳಿಯ ಸಂಬಂಧವನ್ನು ಹೊಂದಿದ್ದರಿಂದ ಸಹಜವಾಗಿಯೇ ತನ್ನೊಡಲ ನೋವುಗಳನ್ನು ಹೇಳಿಕೊಳ್ಳುತ್ತಾಳೆ. ಪ್ರತಿನಿತ್ಯ ಜೀವನದಲ್ಲಿ ಅಂದು ಇಂದಿಗೂ ಅನೇಕ ಸಮಸ್ಯೆ ಸವಾಲುಗಳು ಇವೆ ಇವನ್ನೆಲ್ಲಾ ದೂರ ಸರಿಸಿ ಹೇಳಬೇಕಗಿದೆ. ಗಂಡ-ಹೆಂಡತಿ ಯಾವಾಗಲು ಸಮಾನತೆಯಿಂದ ಬಾಳಬೇಕು, ಬದುಕಬೇಕು ಎಂಬ ಸದಾಶಯವನ್ನು ಹೊಂದಿದ್ದಾರೆ. ಗಂಡ-ಹೆಂಡತಿ ಎರಡು ರಥದ ಗಾಲಿಗೆ ಹೋಲಿಸಲಾಗಿದೆ. ಆದ್ದರಿಂದ ಸಮ ಹೆಜ್ಜೆ ಸಾಮರಸ್ಯದಿಂದ ಆಡಿಕೊಂಡು ಬಾಳಲಾಗುತ್ತಿದೆ. ತನಗೆ ಬೇಕಾದ ಗಂಡನ ಪಡೆಯಲು ಸಹ ಆಕೆ ಆತುರಪಡುತ್ತಾಳೆ. ಬೇಡವಾದ ಗಂಡನ ಬಗ್ಗೆ ತಿರಸ್ಕಾರ ಹೊಂದುತ್ತಾಳೆ. ಗಂಡ ಹೇಳಿದಂತೆ ನ್ಯಾಯ, ನೀತಿ ತತ್ವದ ಆಧಾರದ ಮೇಲೆ ನಡೆದರೆ ಉತ್ತಮ ಇರದಿದ್ದರೆ ಸಾಧ್ಯವಿಲ್ಲವೆಂಬ ಮಾತನ್ನು ಸಹ ಅವರು ಒಪ್ಪಿಕೊಳ್ಳುತ್ತಾರೆ. ಗಂಡ ಹೆಂಡತಿಗೆ ತಕ್ಕವನಾಗಿ ಬಾಳಬೇಕು ಬಾಳದೇ ಹೋದರೆ ಕೂಡಲೆ ಅಂಥ ಗಂಡನನ್ನು ನಿರ್ದಾಕ್ಷಣ್ಯವಾಗಿ ಬಿಟ್ಟು ಬಿಡಬೇಕೆಂದು ಕರೆಕೊಡುತ್ತಾಳೆ.

ಗಂಡನ ಹಿತವೇನು ಕೆಂಡದ ತಂಪೇನು
ಕೊಂಡ ಮಜ್ಜಿಗೆ ರುಚಿಯೇನು ಎಲೆಗೆಲ್ಲಿಯ
ಬಂಡ ಬದುಕಿನ ಫಲವೇನು

ಎನ್ನುವ ದಿಟವಾದ ಉತ್ತರವನ್ನು ಕೊಡುವ ಮೂಲಕ ಒಲ್ಲದ ಗಂಡನನ್ನು ತಿರಸ್ಕರಿಸಿದರು. ಆ ಹೊತ್ತಿನ ಬಹುದೊಡ್ಡ ಕಾಣಿಕೆಯಾಗಿದೆ. ಪಾತಿವ್ರತ್ಯ ಹಾಗೂ ಸತಿ-ಪತಿ ಭಾವದ ಕಲ್ಪನೆ ಅದ್ಭುತವಾದುದನ್ನು ಕಂಡು ಹೊಗಳುತ್ತಾಳೆ. ಪಾತಿವ್ರತ್ಯಕ್ಕೆ ಹೆಚ್ಚಿನ ಮಹತ್ವಕೊಡುವ ಅನೇಕ ಅಂಶಗಳು ಕಾಣಬಹುದಾಗಿದೆ. ಇದರಿಂದ ಜೀವಪರವಾದ

ಸಂಸ್ಕೃತಿ ಜನಪರವಾದ ಮನಸ್ಸನ್ನು ಬದುಕಿನಲ್ಲಿ ಸದಾ ಸ್ವಾಗತಿಸಬೇಕು. ಸದಾ ಸ್ವೀಕರಿಸಿಕೊಂಡು ತನ್ನ ತನದ ಅರಿವನ್ನು ಕಾಣಬೇಕೆಂಬ ಸದ್ವಿಚ್ಛೆಯನ್ನು ಜೀವಪರ ಮನಸ್ಸು ಸಂಸ್ಕೃತಿಯನ್ನು ಒಳಗೊಳ್ಳಬೇಕೆಂಬ ವಿಚಾರಗಳನ್ನು ಸ್ವಾಗತಿಸಿಕೊಂಡ ಬಗೆ ವಿನೂತನವಾದದ್ದು. ಮಹಿಳಾ ಜನಪದ ಸಾಹಿತ್ಯದ ಹೋರಾಟ ಚಿಂತನೆಗೆ ತಮ್ಮ ಅಸ್ತಿತ್ವದ ಕಲ್ಪನೆ ಸದಾ ಹಾತೊರೆಯುತ್ತದೆ. ಜೀವನಪರ ಸಂಸ್ಕೃತಿ ಮನಸ್ಸು ಹೊಂದುವ ಗುಣ ಮಾತೃ ಪ್ರಧಾನ-ಜನಪದ ಮಹಿಳಾ ಕುಟುಂಬದ ಬಯಕೆಯಾಗಿದೆ.

ಕೃಷಿ ಹಾಗೂ ಪತಿವ್ರತ್ಯದ ಎಲ್ಲಾ ಹಂತಗಳನ್ನು ಸಮಾನತೆ ತರುವ ಕೆಲಸ ಜನಪದ ಮಹಿಳೆ ಮಾಡುತ್ತಲೇ ಬಂದಿದ್ದಾಳೆ. ಈ ಪಾವಿತ್ರ್ಯದ ಹತ್ತು ಹಲವು ವಿಚಾರ ಧಾರೆಗಳನ್ನು ಮಾತೃಪ್ರಧಾನ ಸಂಸ್ಕೃತಿಯಲ್ಲಿ ಬೆಳವಣಿಗೆಗೆ ಪರವಾಗುತ್ತಿದೆ. ಪಿತೃ ಪ್ರಧಾನವಾದ ವಿಚಾರಧಾರೆಗಳು ಒಳಗೊಂಡರೆ ಅಲ್ಲಿ ಪುರುಷ ಪ್ರಧಾನ ಸಂಸ್ಕೃತಿ ಪ್ರಧಾನವಾಗಿ ಕಂಡು ಬರುತ್ತದೆ.

ಪಿತೃ ಪ್ರಧಾನ ಸಂಸ್ಕೃತಿಯಲ್ಲಿ ಪುರುಷನೇ ಸರ್ವಸ್ವನಾಗಿರುತ್ತಾನೆ. ಆತನೇ ಪ್ರಬಲ ಶಕ್ತಿಯಾಗಿ ನಿಂತಿರುತ್ತಾನೆ. ಪ್ರತಿಯೊಂದು ಹಂತದಲ್ಲೂ ಮಹಿಳೆಗೆ ತಾನು ಹೇಳದಂತೆ ನಡೆದುಕೊಳ್ಳಬೇಕು. ನಡೆ ನುಡಿಯಲ್ಲಿ ಸಹ ತಮ್ಮದೇ ಆದ ರೀತಿ-ನೀತಿ ಸಂಪ್ರದಾಯಗಳ ಬದ್ಧರಾಗಿದ್ದಾರೆ. ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ತಮ್ಮ ಸಂಪೂರ್ಣವಾದ ರೀತಿ-ನೀತಿಗಳ ಮೂಲಕ ಹತ್ತು ಹಲವು ಸಂಗತಿಗಳನ್ನು ಎತ್ತಿಹಿಡಿದಿದ್ದಾರೆ. ಪುರುಷರು ಸಂಪ್ರದಾಯದ ನೆಲೆಯಲ್ಲಿ ತಾನು ಕಂಡುಕೊಂಡಂತೆ ಬಾಳಬೇಕು ಬದುಕಬೇಕು. ಯಾರನ್ನು ಅವರು ತಿರಸ್ಕರಿಸುವುದಿಲ್ಲ ಮಹಿಳೆ ಸಂಪೂರ್ಣವಾದ ಸ್ಥಾನಮಾನವನ್ನು ಕೊಡುತ್ತೇನೆಂದು ಹೇಳುತ್ತಾರೆ. ವೇದ ಆಗಮ, ಪುರಾಣಗಳು ಸಹಿತ ಮಹಿಳೆಗೆ ಸಂಪೂರ್ಣ ಸ್ವಾತಂತ್ರ್ಯ ಕೊಡಲಿಲ್ಲ. ತಂದೆ, ಅಣ್ಣ, ತಮ್ಮರ ಸಾಲಿನಲ್ಲಿ ಹಿರಿಯರು, ಹಾಕಿಕೊಟ್ಟ ಮಾರ್ಗದಲ್ಲಿ ತನ್ನತನವನ್ನು ಮರೆತಿದ್ದಾರೆ. ಮದುವೆಯ ಹೊತ್ತಿನಲ್ಲಿ ಸಹಿತ ಮಹಿಳೆಗೆ ಸ್ವಾತಂತ್ರ್ಯ ಇರಲಿಲ್ಲ. ತಂದೆ, ತಾಯಿ, ಅಣ್ಣ ತಮ್ಮಂದಿರು ನೋಡಿದ ಗಂಡನನ್ನೇ ಒಪ್ಪಬೇಕಾಯಿತು. ಆಕೆ ಆತನನ್ನೇ ಮದುವೆಯಾಗಬೇಕೆಂಬ ನಿಯಮವನ್ನು ಹೊಂದಿದ್ದರು. ಆ ನಿಯಮ ಪಾಲಿಸದಿದ್ದರೆ ಮಹಿಳೆ ಸಂಪೂರ್ಣವಾದ ಬೆಂಬಲ ಇರುತ್ತಿರಲಿಲ್ಲ. ಮದುವೆ ಪೂರ್ವದಲ್ಲಿ ಮಗಳಿಗೆ ಗಂಡು ನೋಡಲು ಸ್ವತಃ ಮನೆಯವರೆ ಹೋಗುತ್ತಾರೆ. ಮನೆಯಲ್ಲಿ ಹೇಳಿದ ಹಾಗೆಯೇ ಎಲ್ಲರೂ ಪಾಲಿಸಿಕೊಂಡು ಹೋಗಬೇಕು. ಹಿರಿಯರು ನಿರ್ಣಯಿಸಿದ ವರನನ್ನು ಮದುವೆಯಾಗಲು ಮುಂದೆ ಬಂದಿದ್ದಾರೆ. ಜನಪದ ಸಮಾಜದಲ್ಲಿ ಬಾಲ್ಯವಿವಾಹಗಳು ಸಾಕಷ್ಟು ಪ್ರಭಾವಿತವಾಗಿವೆ. ಅವು ಪ್ರಚಲಿತವಾಗಿದ್ದವು

ಜನಪದದಲ್ಲಿ ಸಂಪೂರ್ಣವಾಗಿ ಹುಟ್ಟಿದ ತಕ್ಷಣವೇ ವಿವಾಹ ಮಾಡುವ ಪದ್ಧತಿಯಿತ್ತು. ಬಾಲ್ಯವಿವಾಹವು ಸರ್ವಸಾಮಾನ್ಯವಾಗಿತ್ತು. ಮಹಿಳೆಯ ಮನಸ್ಸು ವ್ಯಕ್ತಿತ್ವ ನಿರೂಪಣೆ ಆಗುವ ಪೂರ್ವದಲ್ಲಿಯೇ ಎಲ್ಲಾ ರೀತಿಯ ಸಂಕುಚಿತಗೊಂಡ ಸಮುದಾಯದ ನೆಲೆಯಲ್ಲಿ ಆಕೆ ನೆಲೆ ನಿಲ್ಲಬೇಕಾಯಿತು. ಮಹಿಳೆ ಇನ್ನು ಬಾಲಕಿಯಿದ್ದಾಗಲೇ ಆಕೆಗೆ ಲೈಂಗಿಕ ಅರಿವು ಮೂಡದೇ ಇದ್ದಾಗಲೇ ಪುರುಷನೊಂದಿಗೆ ವಿವಾಹ ಮಾಡುವುದು. ಆ ಪುರುಷನಲ್ಲಿ ಬಂಧಿಯಾಗುವ, ಬಲಿಯಾಗುವ ರೀತಿಯನ್ನು ನಾವು ಕಾಣುತ್ತೇವೆ.

ಮಹಿಳೆ ಪ್ರೌಢಿಮೆಗೆ ಬರಬೇಕಾದ ಅನಿವಾರ್ಯತೆ ಇದೆ. ಆದರೆ ಇಲ್ಲಿ ಪ್ರೌಢಿಮೆಗಿಂತ ಪೂರ್ವದಲ್ಲಿ ಮಹಿಳೆ ಮದುವೆಗೆ ಬಲಿಯಾಗುತ್ತಾಳೆ. ಹದಿನೆಂಟು ವರ್ಷಗಳು ಕಳೆಯದೇ ಕೇವಲ ಎಂಟು ಹತ್ತು ವರ್ಷಗಳಲ್ಲಿ ಹನ್ನೆರಡು ವರ್ಷಗಳಲ್ಲಿಯೋ ಋತುಮತಿಯಾದರೆ ಸಾಕು ಅವಳನ್ನು ಅವಳು ಸಂಸಾರ ಹಾಗೂ ಲೈಂಗಿಕ ಕ್ರಿಯೆಯಲ್ಲಿ ತೊಡಗಬೇಕಾಗುತ್ತದೆ. ಮದುವೆಯಾದ ಮೇಲೆ ಗಂಡು ಆಕೆಗಿಂತ ಎಷ್ಟೋ ವರ್ಷ ದೊಡ್ಡವನಾಗಿರುತ್ತಾನೆ. ಮೊದಲು ಹೆಂಡತಿ ಮಾಡಿಕೊಂಡು ಹೆಂಡತಿ ಸತ್ತ ಮುದುಕನಿಗೂ ಮದುವೆ ಮಾಡಲಾಗುತ್ತದೆ. ಕಿರಿಯ ವಯಸ್ಸಿನವರನ್ನು ಮದುವೆ ಮಾಡುವ ಸಂದಿಗ್ಧತೆ ಉಂಟು ಮಾಡಲಾಗುತ್ತದೆ. ತನಗೆ ಬೇಡವಾದ ಒಲ್ಲದ ಗಂಡನನ್ನು ಸಂಪೂರ್ಣವಾಗಿ ತಿರಸ್ಕರಿಸುವ ಅಂಶಗಳು ಆಕೆಯ ಹಾಡುಗಳಲ್ಲಿ ಕಾಣುತ್ತೇವೆ. ಅಸಹಾಯಕಳಾದ ಬಾಲೆ ತನ್ನ ವಯಸ್ಸನ್ನು ಮೀರಿ ಆಕೆ ಹೇಳುವ ಬಗೆ ಹೀಗಿದೆ.

ಚಪ್ಪರ ಬೀಳಲಿ ಹಪ್ಪಳ ಮುರಿಯಲಿ
ಮಿತ್ರರೈರಾಣಿ ಒಡಿಯಲಿ

ಎನ್ನುವ ಮೂಲಕ ಹಾಕಿಕೊಟ್ಟ ಚಪ್ಪರ ಮದುವೆ ಮಂಟಪ ಮುರಿದು ಬೀಳಬೇಕು ಹಪ್ಪಳ ಮುರಿದು ಹೋಗಲಿ ಮಿತ್ರರೆಲ್ಲರು ಹಿಡಿದುಕೊಂಡು ಶುಭ ಕೋರುವ ವೈರಾಣಿ ಒಡೆದು ಹೋಗಲಿ ಎಂದು ಶಪಿಸುವುದಲ್ಲದೆ ಸಂಪೂರ್ಣವಾಗಿ ಗಂಡನನ್ನು ತಿರಸ್ಕರಿಸುತ್ತಾ ಬೇಡವಾದ ಮದುವೆಯನ್ನು ತಿರಸ್ಕರಿಸಿ ಜನಪದ ಸಾಹಿತ್ಯದಲ್ಲಿ ಪ್ರತಿಭಟನೆ ಮಾಡುತ್ತಾಳೆ ಮುಂದುವರೆದು ಮಹಿಳೆ ತನ್ನ ಅಸಹಾಯಕತೆಯನ್ನು ಅಲ್ಲಿಗೆ ಬಿಡದೆ ಸಂಪೂರ್ಣವಾಗಿ ಅದನ್ನು ಮುಂದುವರೆಸಿಕೊಂಡು ಬಂದಿದ್ದಾಳೆ. ಅಲ್ಲಿಯ ಅಸಹಾಯಕತೆ ತನ್ನ ಅಂತರಂಗದಲ್ಲಿ ಒಳಗಡೆಯೇ ನೋವು ವ್ಯಕ್ತಪಡಿಸುವುದನ್ನು ನಾವಿಲ್ಲಿ ಕಾಣುತ್ತೇವೆ. ಹಿರಿಯರು ಒತ್ತಾಯ ಮಾಡಿದ್ದರಿಂದ ಮದುವೆ ಹಾಗೇ ನಡೆದುಕೊಂಡು ಬಂದಿತ್ತು.

ಬಾಗಿಲದಾಗಿನ ಕುದುರಿ ಕಾಲಮ್ಯಾಲಾಗಲಿ
ಮದುಮಗ ಕಾಳಂಗ ಮಡಿಯಲಿ

ಎನ್ನುವ ಮೂಲಕ ಅಸಹಾಯಕತೆ ಎತ್ತಿಹೇಳುತ್ತಾಳೆ. ಹಿರಿಯರು ಮಾಡಿದ ಒತ್ತಾಯದ ಮದುವೆಯನ್ನು ಒಪ್ಪಿಕೊಂಡು ಬಾಳಬೇಕಾದ ದುಃಸ್ಥಿತಿಯನ್ನು ತನ್ನ ಮೂಲ ಅಂತರಾಳದ ಗುಣದಿಂದ ಹೊರಹಾಕಿದ್ದನ್ನು ಕಾಣುವೆವು. ಅವಮಾನಿತಳಾದ ಮಹಿಳೆ ತನ್ನ ಅಸಹಾಯಕತೆಯನ್ನು ಕಂಡು ತನಗೆ ಸಾಧ್ಯವೇ ಇಲ್ಲ ಬದುಕಲು ಎಂಬ ಸ್ಥಿತಿಬಂದಾಗ ಪ್ರತಿಭಟನೆಗೆ ಇಳಿಯುತ್ತಾಳೆ. ಭಾರತೀಯ ಸಮಾಜ ಬಹು ಕ್ರೌರ್ಯವಾದದ್ದು. ಈ ಕಾರಣದಿಂದಾಗಿಯೇ ಅವಮಾನಿತರಾಗಿ ಹೊಳೆ. ಕೆರೆ. ಬಾವಿಗಳಿಗೆ ಆತ್ಮಾಹುತಿಯಾಗಬೇಕಾದ ಹಿನ್ನಲೆ ಇದೆ. ಆ ಹೊಳೆಯಲ್ಲಿ ಮುಳಗಿ ಹೋದ ಘಟನೆಯನ್ನು ಆದರಿಸಿಕೊಂಡು ಸತ್ತು ಹೋದ ಕಥೆಯು ನಿನ್ನ ಮುಖ ಸಿಗಲಿಲ್ಲ ಎನ್ನುವ ಕಥನ ಗೀತೆಯ ಮೂಲಕ ನಿರೂಪಿಸಲಾಗಿದೆ. ಆ ಕಥನಗೀತೆ ಸಾವಿನ ಸುದ್ದಿಯೇ ಮೌನವನ್ನು ಎತ್ತಿಹಿಡಿಯುತ್ತದೆ. ಆ ಮೌನವೇ ಇಲ್ಲಿ ಪ್ರತಿಭಟನೆಯಾಗಿ ಹೊರಹೊಮ್ಮಿರುವ ಸಂಗತಿಗಳು ಇಲ್ಲಿ ದಾಖಲಾಗಿವೆ. ಇಂತಹ ಹಾಡುಗಳು ಸಮಾಜವನ್ನು ಚುಚ್ಚುವ ಅಂಶಗಳು ಬೆಳಕಿಗೆ ಬಂದಿವೆ. ಸಾವಿನಲ್ಲೂ ಮೌನದ ಪ್ರತಿಭಟನೆ ಯಥಾವತ್ತಾಗಿ ಹೇಳಿಕೆಗಳು ಬಂದಿವೆ. ಮೌನದ ಮೂಲಕ ಪ್ರತಿಭಟನೆ ಹಾಕುವಾಗಲೂ ತನ್ನ ಅಂತಃಸತ್ವವನ್ನು ಎತ್ತಿ ಹೇಳಿದ್ದಾರೆ. ಅನಿವಾರ್ಯವಾಗಿ ಮಹಿಳೆ ತನಗೆ ಬೇಡವಾದ ಗಂಡನೊಂದಿಗೆ ಬಾಳ್ವೆ ಮಾಡಲೇಬೇಕು ಎಂಬ ಅನಿವಾರ್ಯತೆ ಇದೆ ಎಂಬುವುದನ್ನು ಎತ್ತಿ ಹೇಳಿದಾಗ ಆ ಹಿರಿಯರ ಮಾತು ಗೌರವಕ್ಕೆ ತನ್ನ ತಲೆ ತಗ್ಗಿಸಬೇಕಾದ ಹಲವು ಸಂಗತಿಗಳನ್ನು ಹೊರಹಾಕಬೇಕಾದ ಮಹತ್ವದ ವಿಚಾರಗಳು ವ್ಯಕ್ತಗೊಂಡಿವೆ. ಹಿರಿಯರು ಆತ್ಮೀಯರು ಬೋಧನೆ ಮಾಡಿದಾಗ ಅವರನ್ನು ನೊಂದುಕೊಂಡು ಹೋದಾಗ.

ಇಷ್ಟು ಸಡಗರ ಸೋಯ್ದು ಕುಕುಗೋಲಿಗ್ಯಾಕಲಿ
ಅಷ್ಟು ಸಂಪತ್ತೋಯ್ದು ಸುಡುಗಾಡಿಗಿಕ್ಕಲಿ
ಗಂಡಂತ್ರವಾದೀತು ಬಾಲಿಯ ಈ ಜನುಮ
ಎದೆ ಬಿಚ್ಚಿ ಯಾಗ್ಹೇಳಲಿ ದೇವ ಕೊಟ್ಟಾರ ಮುದುಕಗ

ಎಂದು ಮುದುಕ ಗಂಡನನ್ನು ಸಹ ಆಕೆ ಶಪಿಸುವ ರೀತಿ ಅನನ್ಯವಾಗಿದೆ. ತನ್ನ ಅಸಹಾಯಕತೆ ನೋವುಗಳನ್ನು ಸಹ ಆಕೆ ಹಾಡಿನ ಮೂಲಕ ಅಭಿವ್ಯಕ್ತಿಸಿದ್ದಾಳೆ. ಮದುವೆಯಲ್ಲಿ ಕೊಟ್ಟ ಬಂಗಾರ ಒಡವೆಗಳನ್ನು ವಸ್ತ್ರಾಲಂಕಾರಗಳನ್ನು ತಾನು ಮಹಿಳೆ ಹಾಕಿಕೊಳ್ಳದೆ ಪ್ರತಿಭಟನೆ ಮಾಡುವ ರೀತಿ ನಿರಾಕರಣೆ ಇಲ್ಲಿ ಗಮನಿಸಬೇಕಾಗಿದೆ.

ಮುಡಿಬಿಟ್ಟ ಮೌನ ಪ್ರತಿಭಟನೆಯಲ್ಲಿ ವ್ಯವಸ್ಥೆಯನ್ನು ನಿರಾಕರಣೆ ಮಾಡುವ ಅಂಶಗಳು ಇಲ್ಲಿ ಕಾಣಸಿಗುತ್ತವೆ.

ಕಿರಕ ಸಾಲಿಯ ಗಿಡವು ನೆಲಕ ಹಬ್ಬಿದರೇನ
ಮುದುಕ ಗಂಡನ ಮದಿವ್ಯಾಗಿ। ಆ ಬಾಲಿ
ಎರಕೊಂಡ ಮುಡಿಯ ಬಿಟ್ಟಾರ

ಮದುವೆ ಬಗ್ಗೆ ಮೊದಲೇ ನಿರಾಕರಣೆ ಹೊಂದಿದ ಇವಳು ಮುದುಕ ಗಂಡನ ಮದುವೆಯಾಗಿ ಪ್ರತಿಭಟಿಸಿದ್ದಾಳೆ ಇದನ್ನೇ

ಮದಗುಣತಿ ಗಿಡಾ। ಉದ್ದ ಬೆಳೆದಾರೇನ
ಮುದುಕ ಗಂಡನ ಮದಿವ್ಯಾಗಿ। ಆ ಬಾಲೆ
ಬಂಗಾರ ಇಡವಳ್ಳ

ಹೊಸದಾರಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾಳೆ ಹಳೆಯ ಬೇರಿಗೆ ಹೊಸ ಚಿಗುರು ಕಾಣುವ ಹಾಗೇ ಬಾಳಿನ ಹೊಸ ಕನಸು ಕಂಡದ್ದನ್ನು ಕಂಡ ಮುಗ್ಧ ಹೆಣ್ಣುಗಳ ಕನಸುಗಳು ಒಡೆದು ನುಚ್ಚುನೂರಾಗಿದ್ದವು. ಅವುಗಳನ್ನು ಮುಡಿಯನ್ನು ಕಟ್ಟಿ ಒಡವೆಯನ್ನು ಇಟ್ಟುಕೊಳ್ಳದೆ ಪ್ರತಿಭಟಿಸುವ ರೀತಿ ಮುಖ್ಯವಾಗಿದೆ. ಮಹಾಭಾರತದ ದ್ರೌಪದಿಯಂತಹ ಸ್ತ್ರೀ ಸಂವೇದನೆಯ ಗಟ್ಟಿ ಪಾತ್ರವನ್ನು ಕಾಣುತ್ತೇವೆ. ರಾಮಾಯಣ ಕೈಕೇಯ ಸಹ ತಮ್ಮ ಮುಡಿ (ಕೂದಲು) ಬಿಚ್ಚಿ ಆಭರಣಗಳನ್ನು ತ್ಯಜಿಸಿದರು. ಮಹಿಳೆ ತನ್ನ ಆಭರಣ ಹಾಗೂ ಹಾಕಿಕೊಂಡ ವಸ್ತು ಆಭರಣಗಳು ನಿರಾಕರಣೆ ಮಾಡಿ ತಮಗೆ ಆದ ಅವಮಾನವನ್ನು ಸೇಡನ್ನು ತೀರಿಸಿಕೊಳ್ಳಲು ಕೂದಲು ಬಿಚ್ಚಿ ಪ್ರತಿಭಟಿಸಿದ್ದನ್ನು ನೆನಪಿಸಿಕೊಳ್ಳಬಹುದು. ಆ ರೀತಿ ಅವಮಾನವನ್ನು ಜನಪದ ಮಹಿಳೆ ತನಗಾದ ನೋವನ್ನು ಹೊರಹಾಕಿದ್ದಾಳೆ. ಜನಪದ ಮಹಿಳೆ ಪುರುಷನ ವಿವಾಹ ಬಾಹಿರಸಂಬಂಧಕ್ಕೆ ತನ್ನ ತೀಕ್ಷಣವಾದ ಪ್ರತಿಕ್ರಿಯೆಗಳನ್ನು ಕೊಟ್ಟಿದ್ದಾಳೆ. ಮಹಿಳೆ ಯಾವಾಗಲು ಶೀಲ, ಚಾರಿತ್ರ್ಯ ಹಾಗೂ ಪಾತಿವ್ರತ್ಯಗಳಂತಹ ಹಲವಾರು ವಿಶೇಷ ಸಂದರ್ಭದಲ್ಲಿ ತನ್ನ ಮೂಲ ಗುಣ ಹಾಗೂ ಸಂಸ್ಕೃತಿಯನ್ನು ಅರಿತುಕೊಂಡು ನಡೆಯಬೇಕಾಗಿದೆ. ಮಹಿಳೆ ಶೀಲ, ಚಾರಿತ್ರ್ಯ ಪಾತಿವ್ರತ್ಯಗಳನ್ನು ಚಾಚುತಪ್ಪದೆ ನಡೆಯಿಸಿಕೊಂಡು ಬರಬೇಕು. ಅವನ್ನು ಎಂದೂ ದೂರೀಕರಿಸುವಂತಿಲ್ಲ. ಪುರುಷ ಪ್ರಧಾನ ವ್ಯವಸ್ಥೆ ಸಂದರ್ಭದಲ್ಲಿ ಪುರುಷನಿಗೆ ಹೆಚ್ಚಿನ ಸ್ಥಾನವನ್ನು ಕೊಡಲಾಗಿದೆ. ಮಹಿಳೆ ಸಂಪೂರ್ಣವಾಗಿ ತಿರಸ್ಕರಿಸಲಾಗಿದೆ. ಮಹಿಳೆಗೆ

ಹಲವಾರು ನಿರ್ಬಂಧನೆಗಳಿವೆ ಆದರೆ ಪುರುಷನಿಗೆ ಇವ್ಯಾವು ಕೂಡ ಇಲ್ಲ. ಅವುಗಳಿಂದ ಮುಕ್ತವಾಗಿ ಉಳಿದಿದ್ದಾರೆ. ಅವನ ಸ್ವಾತಂತ್ರ್ಯಕ್ಕೆ ಕಡಿವಾಣ ಇಲ್ಲ ಆತನ ಸಂಪೂರ್ಣವಾದ ನೀತಿ ನಿಯಮಗಳು ಸದಾ ನಲಿದಾಡುತ್ತಿವೆ.

ಗಂಡ ತನ್ನ ಹೆಂಡತಿಯನ್ನು ದೂರೀಕರಿಸಿ ಮತ್ತೊಬ್ಬ ಹೆಣ್ಣನ್ನು ಮಹಿಳೆಯನ್ನು ತನ್ನೆಡೆಗೆ ಆಕರ್ಷಿಸಿಕೊಂಡನೆಂದರೆ ಆತನನ್ನು ಪ್ರಶ್ನಿಸುವಂತಿಲ್ಲ. ಸಮಾಜ ಬಹು ವಿಚಿತ್ರವಾಗಿದೆ. ಮಹಿಳೆಗೆ ಸಂಪೂರ್ಣವಾದ ನೀತಿ, ರೀತಿ, ಚೌಕಟ್ಟುಗಳನ್ನು ಹಾಕಲಾಗಿದೆ. ಆದರೆ ಅದೇ ಪುರುಷ ತನ್ನ ಹೆಂಡತಿ ಬಿಟ್ಟು ಬೇರೆ ಮಹಿಳೆ ಜೊತೆ ಸಂಬಂಧ ಹೊಂದಬಹುದು. ಇದಕ್ಕೆ ಸಂಪೂರ್ಣವಾದ ಚಾಲನೆ ದೊರಕುತ್ತದೆ. ಬೇರೊಬ್ಬ ಮಹಿಳೆಯೊಂದಿಗೆ ಲೈಂಗಿಕವಾದ ಹಂತದಲ್ಲಿ ಹೊಂದಾಣಿಕೆ ಹೊಂದಿದ್ದರೆ ಅದನ್ನು ತಿರಸ್ಕರಿಸುವ ಮನೋಭಾವನೆ ಹೊಂದುತ್ತಿರಲಿಲ್ಲ. ಸಮಾಜ ಮಹಿಳೆಯ ನಡತೆಯನ್ನು ಪ್ರಶ್ನಿಸಿದಂತೆ ಪುರುಷನ ನಡತೆಯನ್ನು ಪ್ರಶ್ನಿಸುವುದಿಲ್ಲ ಯಾಕೆ ಎನ್ನುವ ಆಂತರಿಕ ಬಾಹ್ಯಪ್ರಶ್ನೆಗಳನ್ನು ನಾವು ನೋಡಬೇಕಾಗಿದೆ. ಎಲ್ಲದಕ್ಕೂ ಮಹಿಳೆಯನ್ನೆ ಅಪರಾಧಿಯನ್ನಾಗಿ ಮಾಡಲಾಗಿದೆ. ಮಹಿಳೆಗೆ ಅಪರಾಧವನ್ನು ಹೊರಿಸಲಾಗಿದೆ. ಈ ಕಾರಣದಿಂದಾಗಿಯೇ ಮಹಿಳೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿಲ್ಲ ಎನ್ನುವರು. ಆದರೆ ಮಹಿಳೆಗೆ ಅಪವಾದ ನಿಂದನೆಗಳು ಬಂದೇ ಬರುತ್ತವೆ.

ಮಹಿಳೆಯನ್ನು ಶೋಷಣೆ ಮಾಡುತ್ತಾ ಸಂಪೂರ್ಣವಾಗಿ ನಿರಾಕರಿಸಲಾಗಿದೆ. ಇದರಿಂದ ಹತ್ತುಹಲವು ಸಮಸ್ಯೆ ಸವಾಲುಗಳು ಸಹಿತ ಸಾಧ್ಯವಾಗುತ್ತಿಲ್ಲ. ಇಂತಹ ತಾರತಮ್ಯ ನೀತಿ ಹಾಗೂ ಅನೀತಿಯನ್ನು ಪ್ರತಿಭಟಿಸುವ ಮೂಲಕ ಸಮಾಜದಲ್ಲಿ ಸ್ವಾಸ್ಥ್ಯವನ್ನು ಕಾಪಾಡಲು ಪ್ರಯತ್ನಿಸುತ್ತಾರೆ. ಸಮಾಜದ ಬಹುಮುಖ ನೆಲೆಗಳಲ್ಲಿ ಹಿಂದಿನಿಂದ ಪ್ರಾಚೀನ ಪರಂಪರೆಯಿಂದ ಹಿಡಿದುಕೊಂಡು ಇಂದಿಗೂ ಕೂಡಾ ಹಲವು ರೀತಿಯ ಪದ್ಧತಿಗಳು ಚಾಲ್ತಿಯಲ್ಲಿವೆ. ಬಹುಪತ್ನಿತ್ವ, ವೇಶ್ಯಾಪದ್ಧತಿ, ಉಪಪತ್ನಿತ್ವ ಪದ್ಧತಿಗಳು ಸದಾ ನಮ್ಮಲ್ಲಿ ಬಳಕೆಯಲ್ಲಿವೆ. ಅನೇಕ ವ್ಯವಸ್ಥೆಗಳ ನಡುವೆ ಸಿಕ್ಕುಹಾಕಿಕೊಂಡು ಮಹಿಳೆ ಅಸಹಾಯಕಳಾಗಿದ್ದಾಳೆ. ಮಹಿಳೆ ಒಂದೆಡೆ ಪುರುಷ ಸಂಸ್ಕೃತಿಯನ್ನು ವಿರೋಧಿಸಲು ಆಗದೆ ಇದ್ದಾಗಲು ಸಹ ಪುರುಷ ಪ್ರಧಾನ ಸಂಸ್ಕೃತಿಯ ವಿರುದ್ಧ ಮಹಿಳೆ ಪ್ರತಿಭಟನೆಗೆ ತೊಡಗಿಕೊಂಡಿರುವುದನ್ನು ನಾವಿಲ್ಲಿ ನೋಡಬೇಕಾಗಿದೆ. ಮಹಿಳೆ ಪ್ರತಿಕ್ರಿಯಿಸುವ ರೀತಿಯೂ ಕೂಡ ಇಲ್ಲಿ ದಾಖಲಾಗಬೇಕಾಗಿದೆ. ಸಿಡಿದು ಹೊರಬರಲು ಪ್ರಯತ್ನಿಸಿದ್ದಾಳೆ.

ನಮ್ಮ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಇವತ್ತಿನಿಂದಲೇ ಹೆಣ್ಣಿಗೆ ಶೋಷಣೆ ಮಾಡುತ್ತಲೇ ಬಂದಿಲ್ಲ ಪ್ರಾಚೀನ ಕಾಲದಿಂದಲೂ ಅದರಲ್ಲೂ ದೇವಾನುದೇವತೆಗಳೆಂದು ಹೆಸರುವಾಸಿಯಾದವರು ಸಹಿತ ಇದೇ ನೆಲೆಯಲ್ಲಿ ಚಿಂತನೆ ತೊಡಗಿದ್ದು, ಕಾಣುತ್ತೇವೆ. ದೇವರೆಂದು ಕಲ್ಪಿಸಿಕೊಂಡ ಶಿವನು ಸಹ ಇಂದಿನ ಸಾಮಾನ್ಯ ಪುರುಷ ಜನರಂತೆ ಗಂಗೆ, ಗೌರಿಯನ್ನು ಮದುವೆ ಆದನು. ಬಹುಪತ್ನಿತ್ವಕ್ಕೆ ಹೆಚ್ಚಿನ ಪ್ರಾಧಾನ್ಯತೆ ಕೊಡಲಾಯಿತು. ನಮ್ಮ ಜನಪದರು ಈ ಗಂಗೆ ಗೌರಿ ಸಂವಾದವನ್ನು ಹತ್ತು ಹಲವು ವಿಚಾರಧಾರೆಗಳಿಂದ ಅಧ್ಯಯನ ಮಾಡುತ್ತಾ ಬಂದಿದ್ದಾರೆ. ಗಂಗೆ ಗೌರಿ ಸಂವಾದ ಕನ್ನಡದ ಜನಪದ ಸಾಹಿತ್ಯದಲ್ಲಿ ಬರುವ ಸವತಿಯರ ಸಂಭಾಷಣೆ ಹೋರಾಟ ಚಳವಳಿಗಳ ನಿರಂತರತೆಯನ್ನು ಕಾಪಾಡಿಕೊಂಡು ಬರುವುದನ್ನು ಅಭಿವ್ಯಕ್ತಿಸಲಾಗಿದೆ.

ಗಂಗೆ ಗೌರಿ ಸಂವಾದ ಶಿವನನ್ನೇ ಸ್ತುತಿಸಿ ಶಿವನನ್ನೇ ಪ್ರಧಾನ ವಿಚಾರಧಾರಗಳನ್ನಾಗಿ ಮಾಡಿಕೊಂಡಿದ್ದಾರೆ. ಆದರೂ ಅಲ್ಲಿ ನಡೆಯುವ ಸಂಘರ್ಷ ಇಬ್ಬರು ಹೆಣ್ಣು ಮಗಳ ನಡುವೆ ನಡೆಯುವ ತೀವ್ರ ಭಾವನೆಯೇ ಆಗಿದೆ. ಇಂತಹ ಹಾಡುಗಳನ್ನು ಸವತಿಯರ ಮತ್ಸರಗಳು ಎದ್ದು ಕಾಣುತ್ತವೆ. ಸವತಿಯ ಪ್ರತಿಯೊಂದು ಕಾರ್ಯವಿಧಾನಗಳು ಸಹಿತ ಇಲ್ಲಿ ಉಲ್ಲೇಖಾರ್ಹವಾಗಿವೆ. ಇಲ್ಲಿ ಗಂಗೆ ಗೌರಿಯರು ಶಿವನ ಮೇಲಿನ ಅಸಮಾಧಾನವನ್ನು ಎತ್ತಿ ಹಿಡಿಯುವ ಹಂತವನ್ನು ಹೇಳುತ್ತಾರೆ. ಇವತ್ತಿನ ಸಾಮಾನ್ಯ ಜನರಲ್ಲಿ ಕಾಣಸಿಗುವ ಅಂಶಗಳು ಸಹ ಇವತ್ತಿನ ಶಿವಗಂಗೆ ಗೌರಿಯರಲ್ಲಿ ಜನಪದರಲ್ಲಿ ಕಂಡುಕೊಳ್ಳುವ ಅಂಶಗಳನ್ನು ಪ್ರತಿಪಾದಿಸುತ್ತಾರೆ. ಜನಪದರು ಕೂಡಾ ಎಲ್ಲರೂ ಸಮಾನನೆಲೆ ಹಾಗೂ ತಾರತಮ್ಯದ ನೆಲೆಗಳಲ್ಲಿ ಚಿತ್ರಿಸುವಂಥದ್ದು ಕಾಣಸಿಗುತ್ತದೆ.

ಶಿವಗಂಗೆಯನ್ನು ವಿವಾಹವಾಗಿ ಕರೆದು ತರುವ ಹೊತ್ತಿಗೆ ಗೌರಿಗೆ ಅಸಮಾಧಾನವುಂಟಾಗಿರುತ್ತದೆ. ಆಗ ಕೋಪ, ಸಿಟ್ಟು, ಮತ್ಸರ ಎಲ್ಲವೂ ಏಕಕಾಲಕ್ಕೆ ಪ್ರದರ್ಶನವನ್ನು ಮಾಡಲಾಗುತ್ತದೆ. ಇದರಿಂದ ಸವತಿಯ ಜೊತೆ ನಾನು ಬಾಳಬಾರದೆಂದು ನಿರ್ಧರಿಸಿಕೊಂಡಳು, ಕೊನೆಗೆ ತನ್ನ ಗಂಡ ಶಿವನನ್ನು ಹಾಗೂ ಗಂಗೆಯನ್ನು ತಿರಸ್ಕರಿಸಿ ತನ್ನ ತವರಿಗೆ ಹೊರಡಲು ಉಪಾಯ ಹುಡುಕುವಳು. ಈ ಉಪಾಯದಿಂದ ತಾನು ಮೊದಲು ತಪ್ಪಿಸಿಕೊಂಡರಾಯಿತೆಂದು ಭಾವಿಸಿಕೊಂಡಳು ಶಿವನಲ್ಲಿ ಬೇಡಿಕೊಳ್ಳುತ್ತಾಳೆ. ಎಂಟು ದಿವಸಗಳ ಕಾಲ ಮಾತ್ರ ತವರಿಗೆ ಹೋಗಿ ಬರುತ್ತೇನೆ ಎಂದು ಹೇಳಿ ಹೋದಳು ಗೌರಿ ಎಂಟುದಿನ, ತಿಂಗಳುಗಳು, ಬಹುದಿನಗಳು ಹಾಗೆ ಕಳೆದು ಹೋದವು. ಗೌರಿ ಇಲ್ಲದೆ ಶಿವನಿಗೆ ಬಹು ತೊಂದರೆಯಾಯಿತು. ಪ್ರತಿನಿತ್ಯ 24 ಗಂಟೆ ಗೌರಿಯೊಂದಿಗೆ ಇರುವ ಶಿವ ಕೊನೆಗೆ ಅಸಹಾಯಕನಾಗಿ ಕಂಗಾಲಾಗಿ ಹೋದನು ಗೌರಿಯನ್ನು ಕರೆದುಕೊಂಡು

ಬರಬೇಕೆಂದು ಸ್ವತಃ ಶಿವನೆ ಹೋದನು ಅಲ್ಲಿ ತನ್ನೊಂದಿಗೆ ಹೊರಡಬೇಕೆಂದು ಗೌರಿಗೆ ಸೂಚಿಸಿದ ಅದಕ್ಕೆ ಪ್ರತಿಯಾಗಿ ಗೌರಿ ಹೇಳಿದ್ದು ಹೀಗೆ

ಸಣ್ಣನ್ನ ಶಾವಿಗಿ ಬಸಿ ಬಸಿದಿ ನೀಡಿದರ
ಸಣ್ಣ ಸಿರಿಗಂಗಿ ಕರೆದು ಸಕ್ಕರಿ ಬೇಡುಂಡಿ
ಬಲ್ಲಿನ್ಹೋಗು ನಾ ಬಲ್ಲಿನ್ಹೋಗಯ್ಯಾ
ಹೋಗು ಹೋಗು ಬಾ ಬಲ್ಲಿನ್ಹೋಗಯ್ಯಾ

ಎನ್ನುವ ಮೂಲಕ ಗೌರಿ ಶಿವನೊಂದಿಗೆ ಹೋಗಲು ಹಾಗೂ ಗಂಗೆ ಈಗಾಗಲೇ ಬಂದು ನಿಂತಾಳೆಂಬುವುದು ಮನವರಿಕೆ ಆಗುತ್ತದೆ. ಜೊತೆ ಶಿವನೊಂದಿಗೆ ಹೋಗಲು ನೇರವಾಗಿ ನಿರಾಕರಿಸುವ ಕ್ರಿಯೆ ಪ್ರತಿಭಟನೆಯ ಸಂಕೇತವಾಗಿ ಕಂಡು ಬರುತ್ತದೆ. ತನ್ನ ಜೀವನದಲ್ಲಿ ಮತ್ತೊಬ್ಬ ಹೆಣ್ಣನ್ನು ತಂದು ನನಗೆ ಮೋಸವಾಗಿದೆ ನಾನು ಬರುವುದಿಲ್ಲವೆಂದು ಹೇಳುತ್ತಾಳೆ. ಶಿವ ಅಲ್ಲಿಗೆ ಬಿಡದೆ ಬಲವಂತದಿಂದ ಒತ್ತಾಯ ಮಾಡಿ ಆಕೆಯ ಮನಸ್ಸನ್ನು ಸಂಪೂರ್ಣವಾಗಿ ಹೊರಹಾಕಲು ಪ್ರಯತ್ನಿಸುತ್ತಾನೆ. ಅವನು ಗೌರಿಯ ಕ್ರಿಯೆಯಲ್ಲಿ ತೊಡಗಿ ತುಂಬ ಆಪ್ತವಾಗಿ ಗೌರಿಯನ್ನು ಕರೆದುಕೊಂಡು ಹೋಗಲು ಪ್ರಯತ್ನಿಸುತ್ತಾನೆ. ಕೊನೆಗಳಿಗೆಯಲ್ಲಿ ಸಹ ಗೌರಿಯೇ ಸ್ವತಃ ಮನಸ್ಸನ್ನು ಬಿಟ್ಟು ಹೊರ ಹಾಕುವ ಪ್ರಯತ್ನ ಹೊಂದಲಾಗಿದೆ.

ಹಾಸಿಗೆ ಹಾಸಿದ್ದು
ಮಲ್ಲಿಗೆ ಸೂಸಿದ್ದು
ಸಣ್ಣ ಸಿರಿಗಂಗಿ ಕರೆದು
ಮಂಚಕ್ಕೆ ಎರವಾದೆ
ಬಲ್ಲಿನ್ಹೋಗು ಬಲ್ಲಿನ್ಹೋಗು

ಎಂದು ತನ್ನ ಮನದ ಅಂತರಾಳದ ನುಡಿಯನ್ನು ಹೊರಹಾಕುತ್ತಾಳೆ. ಪ್ರತಿನಿತ್ಯ ನಾನು ತಮ್ಮ ಪಾದ ಸೇವೆಯನ್ನು ಮಾಡುತ್ತ ಬಂದಿದ್ದು ಹಾಸಿಗೆ ಹಾಸಿ ಮಲ್ಲಿಗೆ ಹಾಸಿ ಮಂಚವನ್ನು ಸುಭದ್ರ ಹಾಗೂ ಸ್ವಚ್ಛತೆಯಿಂದ ಇಟ್ಟಿದ್ದೆ ಆದರೆ ಅನಾನುಕೂಲತೆಗಳಿಂದಾಗಿ ನನ್ನನ್ನು ಅರ್ಥೈಸಿಕೊಳ್ಳದೇ ನೇರವಾಗಿ ಕರೆದುಕೊಂಡು ಹೋಗಿ ಗಂಗೆಯ ಕರೆತಂದ ಮಂಚಕೆ ಎರವಾದೆ ಬರುವ ಜೀವನದಲ್ಲಿ ದುರಂತ ಸನ್ನಿವೇಶ ತಂದರೆಂದು ಹೇಳುತ್ತಾಳೆ.

ಶಿವನ ನೀತಿಯನ್ನು ನೇರವಾಗಿ ಖಂಡಿಸುತ್ತಾಳೆ. ಗೌರಿಯು ಅಸಮಾಧಾನ ಪ್ರೀತಿ, ಪ್ರತಿಕ್ರಿಯೆ, ಗಂಗೆ ಗೌರಿ ಮಾತಿನಲ್ಲಿ ಕಂಡುಬರುತ್ತದೆ.

ಇಂತಹ ತಾರತಮ್ಯ ಅಸಮಾಧಾನ ಭಾರತೀಯ ಸಂಸ್ಕೃತಿಯಲ್ಲಿ ಉಳಿದುಕೊಂಡು ಬಂದಿದೆ. ಗಂಗೆ ಗೌರಿಯರ ನೀತಿ ರೀತಿಗಳು ಬಹುಮುಖ ನೆಲೆಗಳಲ್ಲಿ ಕಾಣಸಿಗುತ್ತವೆ. ಸಮಾಜದಲ್ಲಿ ವರ್ಣ ತಾರತಮ್ಯತೆ ವರ್ಗ ಸಂಘರ್ಷಣೆ ಲಿಂಗತಾರತಮ್ಯತೆ ಸದಾ ಇದ್ದೇ ಇದೆ. ನಾನು ಮೇಲು-ಕೀಳು, ಬಡವನು-ಶ್ರೀಮಂತ, ಕಪ್ಪು-ಬಿಳಿ ನಾನು ಗಂಡು-ಹೆಣ್ಣು ಎನ್ನುವ ಅನೇಕ ಕನಿಷ್ಠತನವಾದ ಭಾವನೆಗಳಿಂದ ನೋಡುತ್ತಾ ನಮ್ಮನ್ನು ನಾವು ಒಡೆದು ಆಳುವ ಕ್ರಿಯೆ ಇಲ್ಲಿ ವ್ಯಕ್ತವಾಗಿದೆ. ಅಸಹಾಯಕ ಪರಿಸ್ಥಿತಿಯಲ್ಲಿ ಗೌರಿ ನೆಲೆ ನಿಮತು ಗಂಡನಾದವನು ತನ್ನ ಹೆಂಡತಿಯ ಕಪ್ಪು, ಕುರುಪಿ ಆಗಿದ್ದಾಳೆಂದು ಹೇಳುವ ಮೂಲಕ ತನ್ನ ಅಸ್ತಿತ್ವವನ್ನು ಹೊರಹಾಕುತ್ತಾನೆ. ತನ್ನ ಹೆಂಡತಿ ಕಪ್ಪು ಎಂದಾಗ ದೂರಿಕರಿಸುತ್ತಾನೆ. ಗಂಡು ಅದೇ ಮಹಿಳೆ ಪುರುಷನನ್ನು ದೂರಿಕರಿಸಲು ಸಾಧ್ಯವೇ ಅಂತಹ ಹತ್ತು ಹಲವು ಸಂಗತಿಗಳನ್ನು ಚಾಚು ತಪ್ಪದೆ ನಡೆಸಿಕೊಂಡು ಬಂದ ಘಟನೆಗಳ ಬಗ್ಗೆ ಅಸಮಾಧಾನ ಕ್ರಾಂತಿ ಹಾಗೂ ಸ್ಫೋಟಿಸುವ ಆತ್ಮ ಗೌರವವನ್ನು ಹೆಚ್ಚಿಸಿಕೊಳ್ಳುವ ಗುಣ ಇಲ್ಲಿವೆ. ಕುಂಟನೆಪ ಹೂಡಿ ಬೇರೆ ಹೆಂಡತಿ ಮಾಡಿಕೊಳ್ಳುವ ಶಿವನಿಗೆ ಹಾಗೂ ಪುರುಷ ಪ್ರಧಾನ ವ್ಯವಸ್ಥೆಗೆ ಸವಾಲುಹಾಕುವ ಮೂಲಕ ಬಾಳಬೇಕೆಂಬ ಆಶಯ ಅಲ್ಲದೆ ಒಲ್ಲದ ಗಂಡನಿಗೆ ಹೆಂಡತಿ (ಗೌರಿ) ಹೀಗೆ ನುಡಿಯುತ್ತಾಳೆ.

ಕರಿಯ ಹೆಂಡತಿಯೆಂದು ಕರಿ ಕರಿ ಮಾಡಬ್ಯಾಡ
ಹರಕೊಳ್ಳೋ ನಿನ್ನ ಗುಳದಾಳಿ
ನಾರ‍್ಯೆತನ ಮಗಳಾಗಿತ್ತೇನಿ.

ಎನ್ನುವ ಮೂಲಕ ಸ್ವಾಭಿಮಾನದ ಸಂಕೇತವಾಗಿ ಆತ್ಮಗೌರವವನ್ನು ಉಳಿಸಿಕೊಂಡು ನಾನು ಸಾಯುವವರೆಗೂ ಬದುಕುತ್ತೇನೆಂಬ ಪಿಡಿತ ಗಂಡನು ಹೊರಹಾಕುತ್ತಾಳೆ. ಇದರಿಂದ ಸಂಪೂರ್ಣವಾದ ಹೋರಾಟ-ಜೀವನವನ್ನು ಕಾಣಲು ಪ್ರಯತ್ನಿಸುತ್ತಾಳೆ.

ಬಹುಪತ್ನಿತ್ವ ಪರಂಪರೆಯನ್ನು ವಿನೂತನವಾದದ್ದು ತನ್ನ ಮೂಲ ಅಸ್ತಿತ್ವ ಹುಟುಕಾಟಗಳ ಸಮನ್ವಯತೆ ಹಾಗೂ ಅಲ್ಲಿ ಕಾಣಗೊಡಗುತ್ತದೆ. ಬಹುಪತ್ನಿತ್ವ ಚಾಲ್ತಿಯಿರುವುದು ಮಹಿಳೆಯವರು ಅದನ್ನು ದೂಷಿಸುತ್ತಿದ್ದಾರೆ. ಬಹುಪತ್ನಿತ್ವ ಎಲ್ಲಾದಕ್ಕೂ

ಒಪ್ಪಿತವಾದ ಮುಖ್ಯ ಘಟನೆಯೆಂದು ಭಾವಿಸಿದ್ದಾರೆ. ಅದನ್ನು ಹೊರತುಪಡಿಸಿದರೆ ಮತ್ತೊಂದು ರೀತಿಯಿಂದ ಕೂಡಾ ದೂರನಿಲ್ಲಬೇಕಾದ ಅನಿವಾರ್ಯತೆಯಿದೆ. ಸವತಿಯ ತಂದೇ ತರುತ್ತೇನೆ ಅಗತ್ಯವೇ ಹೇಳುವ ಗಂಡನ ಚಿತ್ರಣ ವಿವರ ಹೇಳುತ್ತಾರೆ.

ಅಂಗೀ ಮ್ಯಾಲಂಗಿ ಚಂದೆನೋ ನನರಾಯ
ರಂಬಿ ಮ್ಯಾಲ ರಂಬಿ ಪ್ರತಿ ರಂಬಿ ಬಂದರೆ
ಛಂದೇನೋ ರಾಯ ಮನಿಯಾಗ

ಎನ್ನುವ ಮೂಲಕ ಈಗಾಗಲೇ ಮನೆಯೊಳಗೆ ನಾನಿದ್ದೇನೆ ನೀನು ಬೇರೆಯವಳ ಕರೆತಂದರೆ ಹೇಗೆ? ಅಂಗಿ ಮ್ಯಾಲ ಅಂಗಿ ಹಾಕಿಕೊಂಡರೇ ಉಗಳತ್ತಾರೆ. ಅದಕ್ಕೆ ತಾವು ಬೇರೆ ರಂಬಿಮ್ಯಾಲ ಪ್ರತಿ ರಂಬಿ ತಂದರೆ ಸಂಸಾರ ಒಂದುಗೂಡಿಸುವುದಿಲ್ಲ. ಅನುಸರಿಸುವುದಿಲ್ಲ ತಾನಾಗಿಯೇ ತಾವೆ ಹೊಂದಾಗಿ ನಡೆಸಿಕೊಂಡು ಹೋದರೆ ಆ ಮರುಸವತಿಯು ಅಕ್ಕಂತಾಳೆ. ಇಲ್ಲ ಸವತಿಯಾಗಲು ಗೌರಿಗೆ ಮುಖ್ಯವಾದದು ತನ್ನ ಮೂಲ ಪುರುಷ ಆಳುವದೊಂದು ಬಾಳಬೇಕಾಗಿದೆ. ತನ್ನ ಕುಟುಂಬ ತಾನು ರಕ್ಷಿಸಬೇಕು ಇನ್ನೋಬ್ಬರ ಮಧ್ಯ ಪ್ರವೇಶ ನನಗೆ ಕಳಕೊಂಡು ವ್ಯಕ್ತಿ ಸಹ ಬದಲಾಗಿ ಹೋಗತ್ತಾರೆ. ಮಹಿಳೆ ಯಾವಾಗಲು ತನ್ನ ಸ್ಥಾನವನ್ನು ಆಕೆ ಬಿಟ್ಟು ಕೊಡಲು ಒಪ್ಪುವುದಿಲ್ಲ ಅದಕ್ಕೆ ಗಾದೆಯೇ ಇದೆ ಸಾವಿರ ಕೊಟ್ಟರು ಸವತಿಯ ಮನಿ ಬ್ಯಾಡ ಎಂದು ಹೇಳುವ ಕ್ರಿಯೆ ಇಲ್ಲಿ ಗಂಭೀರವಾಗಿ ಆಲೋಚಿಸುವಂತಾಗಿದೆ. ಇಲ್ಲಿ ಗಂಡನನ್ನು ಹೆಂಡತಿಯೇ ತೀವ್ರವಾಗಿ ವಿರೋಧಿಸುವ ಗುಣ ಜನಪದ ಸಾಹಿತ್ಯದಲ್ಲಿ ಇಂತಹ ಅಂಶಗಳು ಕಾಣಸಿಗುತ್ತವೆ. ಹೆಣ್ಣು ಗಂಡನೊಂದಿಗೆ ತಾನೋಬ್ಬಳೆ ಇರಬೇಕೆಂದು ಬಯಸುತ್ತಾಳೆ. ಇದು ತಾಯಿ, ತಂಗಿ, ಅಕ್ಕ, ಹೆಂಡತಿ ಯಾರೇ ಆದರೂ ಕೂಡ ಆತ್ಮೀಯ ಭಾವನೆಗಳಲ್ಲಿ ಸಹಿತ ಒಂದಾಗಿ ಹೋಗುವ ಕಾಲಸನ್ನಿಹ ಬಂದಿದ್ದಾಗಲು ಸಹ ಹೋರಾಟದ ಮನೋಭಾವನೆ ಹೆಂಡತಿ ತನ್ನ ಗಂಡ ಪರಸ್ತ್ರೀಯೊಂದಿಗೆ ಸಂಬಂಧ ಹೊಂದಿದ್ದಾನೆ. ಆಕೆಯೊಂದಿಗೆ ಲೈಂಗಿಕ ಸಂಪರ್ಕ ಹೊಂದಿದ್ದಾನೆಂದು ಹೇಳುವ ಮೂಲಕ ತನ್ನ ಮನೆತನದ ಗೌರವ, ಪ್ರತೀಷ್ಠೆ ಕಾಪಾಡಿಕೊಂಡು ಬರಬೇಕು.

ಎಲ್ಲರೂ ಮುಕ್ತವಾಗಿ ಆಕೆಯ ನೋವು ಅರ್ಥ ಮಾಡಿಕೊಳ್ಳಬೇಕು. ತನ್ನ ಮನೆ ಗೌರವ ಪ್ರತಿಷ್ಠೆ, ಬೀದಿಪಾಲಾಗುವುದು ಮನುಷ್ಯನ ನೀತಿ ನಿಯಮಗಳು ಸಾಕಾಗಿ ಹೋಗಿವೆ. ತಾನು ತನ್ನ ಮನೆತನ ನಾಶವಾದ ಬಗೆ ಖೇದವನ್ನು ಹೊಂದಿದ್ದಾಳೆ ಹಾಗೆಯೇ ಸೂಳೆಯರ ವೇಶ್ಯಾ ವೃತ್ತಿಯ ಜನರು ಸಂಪೂರ್ಣವಾಗಿ ನೆಲೆ ನಿಂತು ಅರಿತುಕೊಳ್ಳಬೇಕು.

ಕಾರಣ ಸಂಸ್ಕೃತಿ ಹಾಗೂ ಇಂತಹ ವ್ಯಭಿಚಾರ ಚಟುವಟಿಕೆಗಳ ವಿಷಯ ಸಂಪೂರ್ಣವಾಗಿ ಅಲ್ಲಗಳೆಯಲು ತಾವು ಮೊದಲು ಎಲ್ಲೆಡೆಯಲ್ಲೂ ಮುಖಾ-ಮುಖಿ ಮಾಡಿದಾಗ ಅದಕ್ಕೊಂದು ಅರ್ಥ ಬರುತ್ತದೆ. ಸೂಳೆಯರ ಸಂಸ್ಕೃತಿ ವೇಶ್ಯಾ ಪದ್ಧತಿಗಳು ಸಹ ಅನುಕ್ರಮವಾಗಿ ಬರಲು ಪುರುಷ ಸಮಾಜವೇ ಕಾರಣವೆಂಬ ಅಂಶವನ್ನು ಹೊರಹಾಕಲಾಯಿತು. ವೇಶ್ಯಾ ಪದ್ಧತಿ ಸೂಳೆಗಾರಿಕೆ ಇವನ್ನೆಲ್ಲಾ ದೂರಸರಿಸುವ ಕ್ರಿಯೆ ಇಲ್ಲಿದೆ.

ಗಾಳ ಗಾಳ ಕೇಳೆ ಗಾಳ ಮಾಂಕಾಳ ಕೇಳೆ
ಸೂಳೇರೆ ಕೇರಿಯ ಸುಡಬೇಕು
ಜಾಣರ ಕೇರಿಯಲ್ಲಿ ಇರಬೇಕು

ಇಂತಹ ಮಾತುಗಳನ್ನು ಒಬ್ಬ ಮಹಿಳೆಯ ಶೋಷಣೆ ಹಾಗೂ ಪ್ರತಿಭಟನೆಯನ್ನು ಸಹ ಹೊರಹಾಕುವಲ್ಲಿ ಯಶಸ್ವಿಯಾಗಿದ್ದಾರೆ. ಇಲ್ಲಿರುವ ಸ್ತ್ರೀಶಕ್ತಿ ಕೇಂದ್ರಗಳಲ್ಲಿ ಮಹಿಳೆ ಮೊರೆಯಿಡುತ್ತಾಳೆ. ಸೂಳೇರ ಕೇರಿ, ಜಾಣರ ಕೇರಿಯು ಸಂಪೂರ್ಣವಾಗಿ ಸುಟ್ಟು ಹಾಕಬೇಕೆಂಬ ಸುದ್ದಿ ಜೋರಾಗಿ ಹೊರಹಾಕಿದರು ಮಹಿಳೆ ಇಂತಹ ಅಕ್ರೋಶಗಳ ಗುರಿ ಮಾತುಗಳಗೆ ಅಲ್ಲಿಯ ಗುಣ, ನೀತಿ, ನೆಲನೇ ಕಾರಣವಾಗಿದೆ. ವೇಶ್ಯಾ ವೃತ್ತಿಗೆ ಸೂಳೇಗಾರಿಕೆಗೆ ದಾಸನಾಗಿ ಮನುಷ್ಯ ತನ್ನ ವ್ಯಕ್ತಿತ್ವ ಹಾಳುಗೆಡವಿಕೊಂಡು ನಿಂತಿದ್ದಾನೆ. ಇದರಿಂದ ಇಡೀ ಸಂಪೂರ್ಣ ವ್ಯಕ್ತಿತ್ವ ನಾಶವಾಗಿ ಹೋಗುತ್ತದೆ. ತನ್ನ ಮನದ ನೋವನ್ನು ಮಹಿಳೆ ಹೀಗೆ ಬಿಚ್ಚುತ್ತಾಳೆ.



ಸೂಳೆಗೆ ಹೋದವನು ಏನಾದ ಎಂತಾದ
ಕಾಡು ನಾಯಾದ ಕಪಿಯಾದ ಆ ಮುರುವ
ಸೂಳೇ ಕಾಲಿಗೆ ಕರೆವಾದ

ಎಂದು ಹೇಳುವಲ್ಲಿ ಮಹಿಳೆಯ ನೈತಿಕತೆ ಹಾಗೂ ಆಕ್ರೋಶ ಏಕಕಾಲಕ್ಕೆ ಪ್ರಕಟವಾಗಿದೆ. ಇಲ್ಲಿಯ ಸ್ತ್ರೀಯರು ಒಪ್ಪಿಕೊಂಡು ಸಂಗತಿಗಳು ವಿನೂತನವಾದುದದು. ವೇಶ್ಯಾವೃತ್ತಿ, ಸೂಳೆಗಾರಿಕೆ ನಾಶವಾಗಬೇಕೆಂಬ ಪ್ರತಿಭಟನೆ ನನ್ನ ಕಣ್ಣೆದುರಲ್ಲೆ ಕಾಣಿಸುತ್ತದೆ. ಸೂಳೆಯರ ಸಂಗಿನಿಂದ ಅವನ ಬದುಕು ನಾಶವಾಗುತ್ತದೆ, ಹಾಳಾಗುವುದೆಂದು ಭಾವಿಸಲಾಗುತ್ತಿದೆ. ಮನುಷ್ಯ ಯಾವಾಗಲು ತನಗೆ ಬೇಕಾದಂತ ಬೇಡವಾದ ಕಡೆಗೆ ಗಂಭೀರವಾದ ಚಿಂತನೆ ಮಾಡುತ್ತಾನೆ. ಸಮಾಜ ಬಹು ವಿಶಾಲವಾದದ್ದು ಹಾಗೇ ಅದನ್ನು

ನಾವೆಲ್ಲರೂ ಒಪ್ಪಿಕೊಂಡರೆ ಒಪ್ಪಬೇಕು. ಇರದಿದ್ದರೆ ತಾನು ಅದರಿಂದ ದೂರತಳ್ಳುವ ಕ್ರಿಯೆ ಅದರಲ್ಲಿ ನಡೆಯುತ್ತದೆ. ಇಲ್ಲಿಯ ವರ್ಗ-ವರ್ಣ ವ್ಯವಸ್ಥೆಯ ಆಧಾರದ ಮೇಲೆ ಸಂಪೂರ್ಣ ನಿರಾಕರಣೆಯೂ ಕಾಣಬೇಕಾಗಿದೆ. ಕಷ್ಟ ಪರಸಹಿಷ್ಣುತೆ ಕಾಣಲು ಸಾಕಷ್ಟು ಪ್ರಯತ್ನಿಸುತ್ತಾರೆ. ಆದರೆ ಸಮಾಜ ಮೇಲ್ವರ್ಗ ಕೆಳವರ್ಗವೆಂದು ನೋಡಿಕೊಂಡು ವರ್ಣವ್ಯವಸ್ಥೆ ಕೂಡ ಶ್ರೀಮಂತ ಹಾಗೂ ಬಡತನವೆಂಬ ವರ್ಗವ್ಯವಸ್ಥೆಯಲ್ಲಿ ಕೂಡ ತನ್ನ ಅಂತಃ ಸತ್ವವನ್ನು ಕಾಣಲು ತವಕಿಸುತ್ತಾನೆ. ಈ ಕಾರಣದಿಂದಾಗಿಯೇ ಬಹು ಪ್ರಾಚೀನವಾದ ಮತ್ತು ಅವತ್ತೀನ ಸಂದರ್ಭದಲ್ಲಿ ಸಹಿತ ಈ ಕೀಳು ಭಾವನೆ ಹಾಗೇ ಉಳಿದುಕೊಂಡು ಬಂದಿದೆ.

ತನ್ನ ಹೆಂಡತಿ ಕಪ್ಪು ಬಣ್ಣ ಹೊಂದಿದ್ದಾಳೆಂಬ ತಿರಸ್ಕಾರದಿಂದ ನೋಡುವ ಬಗೆ ವಿಶೇಷತೆಯಿಂದ ಕೂಡಿದೆ. ಕಪ್ಪು ವ್ಯವಸ್ಥೆ ಕೆಳವರ್ಗ ಹಾಗೂ ಅತಿ ಕೆಳಮಟ್ಟದ ವ್ಯಕ್ತಿ ಚಿತ್ರಣವನ್ನು ಕೊಡುತ್ತದೆ. ಇದರಿಂದ ಹೆಂಡತಿಯ ಬಣ್ಣದ ಕಾರಣದಿಂದ ತಕರಾರು ತೆಗೆಯುವ ಗಂಡಂದಿರು ಅನೇಕರಿದ್ದಾರೆ. ಅವರೆಲ್ಲರೂ ಸೇರಿಕೊಂಡು ಕಪ್ಪು ಬಣ್ಣವೆಂಬ ಕಾರಣ ಕೊಟ್ಟು ತಿರಸ್ಕರಿಸುವುದು ಕೂಡಾ ಇಲ್ಲಿ ಗಟ್ಟಿಯಾಗಿ ನಡೆದುಕೊಂಡು ಬಂದಿದೆ. ಇದನ್ನೇಲ್ಲಾ ಕಂಡು ತನ್ನ ಪತಿಯ ಮೋಸತನ ಆತನ ನೀತಿಗಳನ್ನು ಸರಿಯಾಗಿ ಗುರುತಿಸಿ ಅಲ್ಲಿ ಆಕ್ರೋಶ ವ್ಯಕ್ತಪಡಿಸುತ್ತಾಳೆ.

ಕರಿಯ ಹೆಂಡತಿ ಅಂತ ಕರಿ ಕರಿ ಮಾಡಬ್ಯಾಡ
ಹರಕೊಳ್ಳೋ ನಿನ್ನ ಗುಳದಾಳ
ನಾ ರೈತನ ಮಗಳಾಗಿ ಇರತೇನೆ

ಎಂಬ ಆತ್ಮವಿಶ್ವಾಸದಿಂದ ಬಾಳಬೇಕು. ಸ್ವಾವಲಂಬಿಯಾಗಿ ಬದುಕಬೇಕು. ತನ್ನ ಆತ್ಮ ಗೌರವಗಳನ್ನು ಕಾಪಾಡಿಕೊಂಡು ಬದುಕಿ ಜೀವನದಲ್ಲಿ ಯಶಸ್ಸನ್ನು ಪಡೆದೇ ತಿರುತ್ತೇನೆಂಬ ಅಂಶಗಳವನ್ನು ಬಹು ಸ್ಪಷ್ಟವಾಗಿ ಸಿಡಿದು ಪ್ರತಿಭಟನೆಯ ಮೂಲಕ ಹೇಳುತ್ತಾಳೆ. ಜನಪದರು ಎಲ್ಲರೂ ಹೆಚ್ಚಾನೂ ಸಾಹಿತ್ಯದಲ್ಲಿ ನೋಡುವ ಹಾಗೇ ಕಂಡರೆ ಅಲ್ಲಿ ಬಹು ಮುಖ ಸಂಸ್ಕೃತಿಯ ಚಿಂತನೆಗಳು ಕಾಣಸಿಗುತ್ತವೆ. ಬಹುಪತ್ನಿತ್ವವನ್ನು ಪ್ರಶ್ನಿಸುವ ಅನೇಕ ಹಾಡುಗಳು ಇವೆ. ಆ ಹಾಡುಗಳಲ್ಲಿ ಒಂದು ವಿನೂತನವಾದ ಕೊಡುಗೆಯನ್ನು ಕೊಟ್ಟಿವೆ. ಜಗತ್ತಿನ ಶ್ರೇಷ್ಠ ಚಿಂತನೆ ವಿಚಾರಧಾರೆಗಳು ಸಹ ಬೆಳಕಿನಲ್ಲಿಯೇ ಹೊರಹಾಕುವುದನ್ನು ಗಮನಿಸಬೇಕಾಗಿದೆ. ಸವತಿಯನ್ನು ತರುತ್ತೇನೆಂದು ಗೊತ್ತಾದಾಗ ಹಳಹಳಸುವುದೇ ಬಹಳ ಆದರೆ ಅದನ್ನು ತಿರಸ್ಕರಿಸುವ ಬುದ್ಧಿಯ ಕಾಲಕ್ಕು

ಇಲ್ಲವಾಗಿದೆ. ತಾಮುಡಿದ ಮಲ್ಲಿಗೆ ಅವಳೊಂದು ಗಳಿಗೆ ಮುಡಿಯಲಿ ಎಂದು ಹೇಳುವ ಕ್ರಿಯೆ ಕಂಡಾಗ ಆಕೆ ರೋಸಿ ಹೋಗಿ ತನಗೆ ಸಂಪೂರ್ಣವಾಗಿ ಯಾವ ರೀತಿಯನ್ನು ತನ್ನಿಂದ ಏನು ಮಾಡಲು ಸಾಧ್ಯವಿಲ್ಲವೆಂಬ ಅಂಶವನ್ನು ಗಮನ ಸೆಳೆಯುವ ಹಾಗೆ ಹೇಳುತ್ತಾರೆ. ಆಗ ಗಂಡನಿಗೆ ತನ್ನ ನೋವನ್ನು ತೋಡಿಕೊಳ್ಳುತ್ತಾಳೆ. ಅಲ್ಲಿ ಗಂಡನ ಮನಸ್ಸಿಗೂ ನೋವಾಗಬಾರದು ತನ್ನ ಅಂತರಂಗದ ತಳಮಳ ತಲ್ಲಣಗಳು ಸಹಿತ ಅಲ್ಲಿ ಹೊರಹಾಕಬೇಕಾಗುವ ಅನಿವಾರ್ಯತೆ ಎತ್ತಿ ಹೇಳಿದ್ದಾಳೆ.

ಅಂಗಿಯ ಮ್ಯಾಲಂಗಿ ಚಂದೆನೋ ನನರಾಯ
ರಂಬಿ ಮ್ಯಾಲ ರಂಬಿ ಪ್ರತಿರಂಬಿ ಬಂದರೆ
ಛಂದೇನೋ ರಾಯ ಮನಿಯಾಗ

ಎಂದು ಹೇಳುವ ಮೂಲಕ ಪ್ರತಿಭಟನೆಯನ್ನು ಸೂಕ್ಷ್ಮವಾಗಿ ಮಾಡಿ ನಾಮೂಡಿದ ಕ್ಯಾದಿಗೆ ಒಂದು ಗಳಿಗೆ ಮೂಡಿಯಲಿ ಎನ್ನುವ ಸಾಲಿನಲ್ಲಿ ತನ್ನ ನಂತರ ಎಲ್ಲಾ ಅವಳಿಗೆ ದೊರಕಲಿ ಎನ್ನುವಲ್ಲಿ ಹತಾಶೆ, ನೋವು ಪ್ರತಿಭಟನೆ ಇರುವುದು ಸತ್ಯವಾಗಿದೆ. ಪತ್ನಿಯಾದವಳು ತನ್ನ ಹಾಗೂ ತನ್ನ ಕುಟುಂಬವನ್ನು ಸರಿಯಾದ ರೀತಿಯಲ್ಲಿ ನೋಡಿಕೊಳ್ಳಬೇಕಾದದ್ದು ತುಂಬಾ ಅವಶ್ಯವಾದದ್ದು ಅದಕ್ಕೆ ತನ್ನ ಗಂಡನ ಮಾನ ಗುಪ್ತವಾಗಿ ಇಟ್ಟುಕೊಂಡಿರುತ್ತಾಳೆ. ಈಗಾಗಲೇ ಜಗತ್ತೆ ನಿರ್ಧರಿಸಿದಂತೆ ಗಂಡ ತನ್ನ ಹೆಂಡತಿ ಬಿಟ್ಟು ಬೇರೊಬ್ಬ ಮಹಿಳೆಯೊಂದಿಗೆ ಸಂಬಂಧವಿರಿಸಿಕೊಂಡ ಲೈಂಗಿಕ ಕ್ರಿಯೆಗೆ ತೊಡಗಿಕೊಂಡ ಸೂಳೆಯ ಜೊತೆ ಹೊಂದಾಣಿಕೆ ಮಾಡಿಕೊಂಡು ತನ್ನ ದಿನನಿತ್ಯದ ಕೆಲಸ ಕಾರ್ಯಗಳನ್ನು ಚಾಚುತಪ್ಪದೆ ನಡೆಸಿಕೊಂಡು ಬರುತ್ತಾನೆ. ಇಂತಹ ಅನೇಕ ವಿಚಾರಗಳನ್ನು ಕಲಿತುಕೊಂಡು ಬಂದಾಗ ಪತ್ನಿಯಾದವಳು ಪ್ರತಿಭಟಿಸಲು ಸಾಧ್ಯವಾಗಲಿಕ್ಕಿಲ್ಲ ತನ್ನ ಮನದಾಳದ ನೋವುಗಳನ್ನು ಸೂಕ್ಷ್ಮವಾಗಿ ಹೇಳುವ ಮೂಲಕ 'ಸಾವಿರ ಕೊಟ್ಟರು ಸವತಿಯ ತರಬೇಡ' ಎಂಬ ಹಾಡಿನ ಮೂಲಕ ಆಕೆಯನ್ನು ಪ್ರತಿರೋಧಿಸುವ ಕಾರಣ ಎದ್ದು ಕಾಣುತ್ತದೆ. ನೀನು ಎಲ್ಲೇ ಇದ್ದರೂ ಆಕೆಯನ್ನು ಮನೆತನಕ್ಕೆ ತರಬೇಡ ಎಂಬುವಲ್ಲಿ ವಿರೋಧವಿದೆ. ತನ್ನ ಮನೆತನದ ಗೌರವ ಸರ್ವಸ್ವ ನಾಶವಾಗುತ್ತದೆಂದು ಹೇಳುತ್ತಾ ಸೂಳೆಯರ ಸಂತತಿಯು ಪ್ರತಿಭಟಿಸಿ ಅವರಿಗೆ ಹಿಡಿಶಾಪ ಹಾಕಿ ತನ್ನ ಮನದ ನೋವನ್ನು ಕಳೆದುಕೊಳ್ಳುತ್ತಾರೆ. ಇವತ್ತಿನ ದಿನಗಳಲ್ಲಿ ಏಕೆ ಪ್ರಾಚೀನ ಕಾಲದಿಂದಲೂ ಸೂಳೆಗಾರಿಕೆ ವೇಶ್ಯಾ ಪದ್ಧತಿಯನ್ನು ಮುಂದುವರೆಸಿಕೊಂಡು ಶಾಶ್ವತವಾಗಿ ಹಾಗೆ ನಡೆಸಿಕೊಂಡು ಬಂದದ್ದು ಈ ಪುರುಷ ಪ್ರಧಾನ ಸಮಾಜ ಎಂಬುವುದನ್ನು ಯಾರು ಅಲ್ಲಗಳೆಯುವಂತಿಲ್ಲ. ಆದರೆ ಮಹಿಳೆಗೆ ತನ್ನ ಗಂಡ ಹಾಗೂ ಪುರುಷನು ಮಾಡುತ್ತಿರುವ

ಈ ಕಾರ್ಯಕ್ಕೆ ಆತನೊಂದಿಗೆ ಸಂಬಂಧವಿರಿಕೊಂಡವಳ ಬಗ್ಗೆ ಹೆಚ್ಚಿನ ಕಾಳಜಿಹೊಂದಿ ಹೆಣ್ಣನ್ನು ದೂರಿಕರಿಸುತ್ತಾರೆ. ಅದಕ್ಕೆ ತನ್ನ ಪತ್ನಿ ಹಾಗೂ ಗಂಡು ಎನ್ನುವುದನ್ನು ಯಾರು ಒಪ್ಪಕೊಳ್ಳುವುದಿಲ್ಲ ಇಂತಹ ಸೂಜಿಗದ ದುರಂತದ ಸಂದರ್ಭದಲ್ಲಿ ಮಾತ್ರ ಪತ್ನಿ-ಪತಿಯನ್ನು ಗೌರವಿಸುತ್ತಿರುವುದು ಭಾರತೀಯ ಸಂಸ್ಕೃತೀಯ ದ್ಯೋತಕವಾಗಿದೆ.

ಗಾಳಿ ಗಾಳಿ ಕೇಳೆ ಗಾಳಿ ಮಾಂಕಾಳಿ ಕೇಳೆ
ಸೂಳೇರ ಕೇರಿಯ ಸುಡಬೇಕು
ಜಾಣರ ಕೇರೀಲಿ ಇರಬೇಕು.

ಎಂಬ ಆಕ್ರೋಶವನ್ನು ಪ್ರತಿಭಟನೆಯು ನೇರವಾಗಿ ಮಾಡುತ್ತಾಳೆ. ಗಾಳಿ ಮಹಾಕಾಳಿನ ಕೇಳಿಕೊಳ್ಳುವುದು "ಸೂಳೇರಿ ಕೇರಿ ಸುಡಬೇಕು" ಎಂಬ ಮಾತಿನಲ್ಲಿ ಬಹು ಅಚ್ಚಳಿಯದಂತೆ ಉಳಿದ ಅನೇಕ ದುರಂತದ ಚಿತ್ರಣವನ್ನು ಕೊಡುತ್ತಾಳೆ. ಅಲ್ಲದೆ ತನ್ನ ಗಂಡನಾಗಲಿ ತಂದೆ, ಅಣ್ಣ, ತಮ್ಮ ಯಾರೇ ಆಗಲಿ ಆ ಪುರುಷ ಪ್ರಧಾನವಾದ ವ್ಯವಸ್ಥೆಗೆ ಸವಾಲ ಹಾಕುವ ಚಿತ್ರಣವನ್ನು ಸಹ ಇಲ್ಲಿ ದಾಖಲಿಸಿದ್ದಾಳೆ ಮಹಿಳೆ.

ಸೂಳೆಗೆ ಹೋದವನು ಏನಾದ ಎಂತಾದ
ಕಾಡು ನಾಯದ ಕಪಿಯಾದ ಆ ಮುರುವ
ಸೂಳೆ ಕಾಲಗೆ ಕೆರವಾದ

ಇಡೀ ವ್ಯವಸ್ಥೆಯನ್ನು ಮಹಿಳೆ ಅಲುಗಾಡಿಸುತ್ತಾಳೆ. ಸೂಳೆ ಹಾಗೂ ವೇಶ್ಯಾವಾಟಿಗೆ ಹೋಗುವ ಪುರುಷನನ್ನು ಕಂಡು ಅಸಹ್ಯಪಡುತ್ತಾಳೆ. ಸೂಳೆಯನ್ನು ಇಡುವುದೇ ಒಂದು ದೊಡ್ಡ ಪ್ರೆಸ್ಟೀಜ್ ಅಂದು ಆಗಿತ್ತು. ಇಂದಿಗೂ ಅದನ್ನು ಮುಂದುವರೆಸಿಕೊಂಡು ಬರುತ್ತಿರುವುದಕ್ಕೆ ಲೆಕ್ಕವೇ ಇಲ್ಲ. ಇದರಿಂದ ಮಾನ ಮರಿಯಾದೆ ಮನೆತನದ ಗೌರವ ಹಾಳಾಗುತ್ತಿರುವುದಲ್ಲದೇ ಸಂಪೂರ್ಣವಾಗಿ ತನ್ನ ಅಸ್ತಿತ್ವ ನಾಶವಾಗುವುದನ್ನು ಕಂಡು ಅಸಹ್ಯಪಟ್ಟುಕೊಳ್ಳಲಾಗುತ್ತಿದೆ. ಸಮಾಜವೂ ಸಹ ತಿರಸ್ಕಾರದಿಂದ ನೋಡುತ್ತದೆ. ಆದ್ದರಿಂದ ಆ ಸಂದರ್ಭ ಹೊಂದಿದ್ದರೆ ಜೀವನವೇ ಹಾಳಾಗಿ ಹೋಗುವ ಭಯವನ್ನು ಮಹಿಳೆ ಹೊಂದಿದ್ದಾಳೆ. ನಮ್ಮ ಜಗತ್ತಿನಲ್ಲಿರುವ ಪ್ರತಿಯೊಂದು ಧರ್ಮಶಾಸ್ತ್ರಗಳು, ಗ್ರಂಥಗಳು ಸಹ ಮಹಿಳೆಗೆ ಸಂಪೂರ್ಣ ಸ್ವಾತಂತ್ರ್ಯ ನೀಡಿಲ್ಲ. ಪುರುಷನನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ನಡೆಯಬೇಕಾಗಿದೆ ಆದರೆ ಮಹಿಳೆ ಸಂಪೂರ್ಣವಾಗಿ ಪುರುಷನ ಅಧೀನದಲ್ಲಿಯೇ ತನ್ನತನವನ್ನು ಕಳೆದುಕೊಂಡಿದ್ದಾಳೆ. ಹೀಗಾಗಿ ಆಶ್ರಯದಲ್ಲಿ

ಬಾಳಬೇಕಾದ ಸಂಪ್ರದಾಯವು ಕಟ್ಟಪ್ಪಣೆ ಮಾಡಿಬಿಟ್ಟಿದೆ ಅದು ಅಲ್ಲದೆ ಬಾಲ್ಯದಲ್ಲಿ ತಂದೆ, ಯೌವ್ವನದಲ್ಲಿ ಗಂಡ, ವೃದ್ಧಾಪ್ಯದಲ್ಲಿ ಮಗನ ರಕ್ಷಣೆಯಲ್ಲಿ ಬಾಳಬೇಕೆಂಬ ಸನಾತನಾದಿಗಳ ಕುತಂತ್ರದಿಂದ ಬೋಧಿಸಿದ ಮಾತುಗಳೆ ಎಲ್ಲಾ ಕಾಲಕ್ಕೆ ಸರ್ವಶ್ರೇಷ್ಟವಾದವು ಪುರುಷನ ಆಧೀನಕ್ಕೆ ಒಳಪಡುವ ಇದರಿಂದ ಸ್ವತಂತ್ರವಾದ ರೀತಿಯಲ್ಲಿ ಬಾಳಬೇಕಾದವಳು ಬಂಧಿಯಾಳು ಇಂತಹ ಹೊತ್ತಿನಲ್ಲಿ ಸತಿ ಪದ್ಧತಿಯ ಕಣ್ಣಿರ ಮಾತಾಯ್ತು ಅವುಗಳ ವೈರುಧ್ಯವನ್ನು ಕಂಡು ನಿರಾಕರಿಸುವಲ್ಲಿ ಪ್ರತಿಭಟನೆಯ ಧ್ವಜ ಹಾರಿಸಿದ್ದಾಳೆ. ಜನಪದರಲ್ಲಿ ಬಹು ಕಟ್ಟುಪಾಡುಗಳಿವೆ ಅದನ್ನು ಸನಾತನ ಧರ್ಮ ಗೊಡ್ಡು ಸಂಪ್ರದಾಯ ಮುನ್ನಡೆಸಿಕೊಂಡು ಬಂದಿದೆ. ಪತಿ (ಗಂಡ) ಮರಣ ಹೊಂದಿದ್ದರೆ ಹೆಂಡತಿಯ ಮರು ಮದುವೆಗೆ–ಮರುವಿವಾಹಕ್ಕೆ ಅವಕಾಶವಿರಲಿಲ್ಲ ಹೆಂಡತಿ ಸತ್ತ ಕೆಲದಿನಗಳಲ್ಲಿ ಗಂಡ ವಯಸ್ಸಾದರೂ ಮತ್ತೊಂದು ಹೆಂಡತಿಯನ್ನು ಮಾಡಿಕೊಳ್ಳುವ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಇಲ್ಲಿ ಮಹಿಳೆಗೆ ಯಾವತ್ತು ತನ್ನ ಸುಖವನ್ನು ಬಯಸುವುದಿಲ್ಲ ಸಮಾಜದ ಕುಟುಂಬದ ಒಳತಿಗಾಗಿ ಬಯಸುತ್ತಾಳೆ ಇಂತಹ ಹೊತ್ತಿನಲ್ಲೂ ಸಹಿತ ಮನುಷ್ಯ ಹತ್ತು ಹಲವು ಸಂಗತಿಗಳ ಮೂಲಕ ದೂರನಿಲ್ಲಬೇಕಾದ ಅನಿವಾರ್ಯತೆಯಿದೆ. ಇಂತಹ ಪರ ವಿರೋಧದ ಮಧ್ಯದಲ್ಲೂ ಮಹಿಳೆ ಪುರುಷರ ನೀತಿ ಅವರ ಆಧೀನದಲ್ಲಿ ಬಾಳಬೇಕಾಗುವ ಸಂದಿಗ್ಧ ಪರಿಸ್ಥಿತಿಯಲ್ಲಿ ಇರಬೇಕಾಗುತ್ತದೆ.

ಮಹಿಳೆಗೆ ಗಂಡ ಸತ್ತರೆ ಆಕೆಗೆ ಅಶುಭ ಶುಭಸಮಾರಂಭದಲ್ಲಿ ಆಕೆ ಭಾಗವಹಿಸುವಂತಿಲ್ಲ ಸಮಾಜ ಕೀಳು ದೃಷ್ಟಿಯಿಂದ ನೋಡಬೇಕಾಗುತ್ತದೆ. ಹೆಣ್ಣು ತನನ ಗಂಡನನ್ನು ಕಳೆದುಕೊಂಡ ನೋವಿನಲ್ಲಿರುವಾಗ ಎಲ್ಲರೂ ಈಕೆಯನ್ನು ಗೌರವಿಸಬೇಕು. ಸಾಂತ್ವನ ಹೇಳಬೇಕು ಅದುಬಿಟ್ಟು ಆಕೆಯ ನಿರಾಕರಿಸುವುದನ್ನು ಕಾಣುತ್ತದೆ. ಇದೊಂದು ಬಹು ದೊಡ್ಡ ದುರಂತವಾಗಿದೆ.

ಇತ್ತ ವಯಸ್ಸು ಹದಿ ಹರೆಯದಲ್ಲಿದ್ದರೂ ಹಸಿಮಣೆ ಏರಲು ಅವಕಾಶವಿಲ್ಲ ಒಂದು ಕಣ್ಣಿಗೆ ಬೆಣ್ಣೆ ಮತ್ತೊಂದು ಕಣ್ಣಿಗೆ ಸುಣ್ಣ ಬಳಿಯುವ ಕಾರ್ಯತಂತ್ರರೂಪಿಸಿದ್ದಾರೆ. ವಿಧವೆಯಾದ ಮಹಿಳೆ ಸಮಾಜದ ದೃಷ್ಟಿಯಲ್ಲಿ ಯಾರಿಗೂ ಬೇಡವಾದ ವ್ಯಕ್ತಿಯಾಗಿದ್ದಾಳೆ. ವಿಧವೆಯಾದ ಮಹಿಳೆ ಸಮಾಜದ ದೃಷ್ಟಿಯಲ್ಲಿ ಯಾರಿಗೂ ಬೇಡವಾದ ವ್ಯಕ್ತಿಯಾಗಿದ್ದಾಳೆ. ಗಂಡನ ಮನೆಯ ಸ್ವಾತಂತ್ರ್ಯ ಇಲ್ಲದೆ ಎರಡು ಹೊತ್ತಿನ ಊಟಕ್ಕಾಗಿ ಬಡದಾಡಬೇಕಾದ ಪ್ರಸಂಗ ಬರುತ್ತದೆ. ಕಣ್ಣೀರಿನಲ್ಲಿ ಕೈ ತೊಳೆದುಕೊಳ್ಳಬೇಕಾದ ವಾತಾವರಣವನ್ನು ನಿರ್ಧರಿಸಲಾಗುತ್ತದೆ. ಪುರುಷಾಧಿಕಾರವನ್ನು ಬಹು ಬಗೆಯಿಂದ ನೋಡಿಕೊಳ್ಳಬೇಕಾದ ಸಂಪೂರ್ಣವಾದ ಜವಾಬ್ದಾರಿ ಆತನಿಗೆ ನೀಡಲಾಗಿದೆ. ತನ್ನ ವ್ಯಕ್ತಿತ್ವ ರೂಪಿಸಿಕೊಳ್ಳಲು

ಗಂಡನೇ ಸಹಕಾರಿ ಎಂದು ಒಪ್ಪಿಕೊಂಡರು. ಶೀಲ-ಸಚಾರಿತ್ರ್ಯ. ಪಾತಿವ್ರತ್ಯದ ಬಗ್ಗೆ ಆದರ್ಶಗಳನ್ನು ನೀಡಿ ತಂತ್ರಗಳನ್ನು ಅರಿತುಕೊಂಡು ತನ್ನ ಆಸೆ-ಆಕಾಂಕ್ಷೆ ಬೇಡಿಕೆ ಕನಸುಗಳನ್ನು ಹಾಗೆ ಕೊಂದುಕೊಂಡು ಬದುಕಬೇಕಾಗಿದೆ. ತನ್ನತನವನ್ನು ಬಲಿಕೊಟ್ಟು ಬಾಲುವುದಲ್ಲದೇ ಅಂತಹ ವೈಧವ್ಯವನ್ನು ಅನಿವಾರ್ಯವಾಗಿ ಒಪ್ಪಿಕೊಂಡು ಬಾಳಬೇಕಾದದ್ದು ಅಪರೂಪ ಅದರೊಳಗಡೆ ತನ್ನ ಕನಸುಗಳನ್ನು ನುಚ್ಚು ನೂರಾಗಿ ಬರಡಾದ ಜೀವನ ಕಾಳಕಳೆಯಬೇಕಾಗುತ್ತದೆ. ಯಾವಾಗ ಗಂಡ ಮರಣ ಹೊಂದಿದನೋ ಆತನ ಸುಖಗಳನ್ನು ಆತಪ್ರೀತಿಸುವ ಪ್ರತಿಯೊಂದು ವಸ್ತುಗಳನ್ನು ಬೆಲೆಯ ಹಾಕಿ ಸುಡುವ ಕ್ರಿಯೆಗಳು ಕೂಡಾ ಸಾವಿರಾರು ವ್ಯಕ್ತಿಗಳಿಂದ ನಡೆದುಕೊಂಡು ಬಂದಿವೆ. ಈ ಕಾರಣದಿಂದಾಗಿಯೇ ಬಹುಮುಖಿ ಪರಂಪರೆ ಏಕ ಮುಖಿಯಾಗಿವೆ. ಪುರುಷನ ಆಸ್ತಿ ವಸ್ತುಗಳಲ್ಲಿ ಹೆಂಡತಿಯು ಒಂದಾಗಿದೆ. ಹೆಂಡತಿಯು ಗಂಡನ ಚಿತೆಯೊಳಗೆ ಹಾಕಿ ಸುಡುವ ಕ್ರಿಯೆ ನಡೆಯಿತು ಗಂಡನ ಪಕ್ಕದಲ್ಲಿಯೇ ಇಟ್ಟು ಆಕೆಯ ಜೀವಂತವಾಗಿ ಸುಡುವ ಕೆಲಸ ಕಾರ್ಯ ಕೈಗೊಳ್ಳಲಾಯಿತು. ಅಲ್ಲದೇ ಕುಂಕುಮ ಅಳಿಸಿಕೊಂಡು ಬಳೆ ಒಡೆದುಕೊಂಡು ಬಂಗಾರ. ಒಡವೆಗಳ ದೂರಿಕರಿಸಿಕೊಂಡು ಬಿಳಿ ಬಟ್ಟೆ ಧರಿಸಿಕೊಂಡು ಯಾವ ಕೆಲಸ ಕಾರ್ಯಗಳಿಗೆ ಹೋಗದೆ ತನ್ನಷ್ಟಕ್ಕೆ ತಾನೆ ನಾಲ್ಕು ಗೋಡೆ ಮಧ್ಯದ ಮೂಲೆಯಲ್ಲಿ ಕುಳಿತುಕೊಂಡು ನೋವನ್ನು ಅನುಭವಿಸಿ ಜೀವಂತವಾಗಿ ತನ್ನ ಪ್ರತಿಯೊಂದು ಅಂಶಗಳನ್ನು ಗಮನದಲ್ಲಿರಿಕೊಂಡ ಬಾಳಬೇಕಾಗಿದೆ. ಜೀವನವನ್ನು ಕಳೆಯಬೇಕಾಗುತ್ತದೆ. ಅಂತಹ ಹೊತ್ತಿನಲ್ಲಿಯೂ ಸಹ ಮಹಿಳೆ ಅವುಗಳನ್ನೆಲ್ಲಾ ಯೋಚಿಸಿ ಸಮಾಜದಲ್ಲಿ ತನ್ನನ್ನು ಒಪ್ಪಿಕೊಳ್ಳಲಾರರು ಎಂಬ ಖಚಿತತೆ ಹೊಂದಿಕೊಂಡು ತನ್ನಂತ ಸಾವಿರಾರು ಮಹಿಳೆಯರ ಹತಭಾಗಿನಿಯಾಗಿ ಉಳಿಯುವುದನ್ನು ನೋಡಿಯೇ ಸ್ವಪ್ರೇರಣೆಯಿಂದ ಪತಿಯೊಂದಿಗೆ ಸತಿಯು ಚಿತೆ ಏರುವ ಮೂಲಕ ಗಂಡನ ಪ್ರೀತಿಯ ಎತ್ತಿ ತೋರಿಸುತ್ತಾಳೆ. ಕಠೋರ ಸಮಾಜ ನೀತಿ ಕ್ರೂರವಾದ ಸಮುದಾಯಗಳೊಡನೆ ಬಾಳಲು ಆಗದೆ ಅನುಮಾನ ಶಂಕೆಗಳ ಮೂಲಕ ನೋಡುವವರನ್ನು ನಿರಾಕರಿಸಿ ಸಮಾಜ ಅವಳನ್ನು ಅವಳ ಬದುಕು ಕನಸುಗಳಿಗೆ ಬೆಂಕಿ ಇಟ್ಟು ನೋಡುವ ಕ್ರಿಯೆ ದುರಂತವಾದದ್ದು. ಆಕೆಯನ್ನು ದೇವಿಯ ಪಾತ್ರದಲ್ಲಿ ಕುಳ್ಳಿರಿಸಿ ಸತಿ ಚಿತೆಯೇರಿದ ಮೇಲೆ ಹಾಡಿ ಹೋಗುಳವಿಕೆಯ ಚಿತ್ರಣ ಕೊಡಲಾಗಿದೆ. ಸಮಾಜದಲ್ಲಿ ಸಹಿತ ಒರೇಯಾದ ನೀತಿ-ನಿಯಮಗಳೆಲ್ಲಾ ತಮಗೆ ಒಪ್ಪಿತವಾದ ಘಟನೆಯನ್ನು ಪುರುಷ ಹಾಗೇ ಹೊಂದಿಕೊಂಡು ಹೋಗಬೇಕಾದ ಅನಿವಾರ್ಯತೆಯು ಹೇಳುತ್ತಾನೆ. ಕೆಲವರ್ಗದಲ್ಲಿ ವಿಧವೆಯಾದ ಮಹಿಳೆ ಮರುವಿವಾಹ ಅಂದರೆ “ಉಡಿಕೆ” ಮಾಡಿಕೊಳ್ಳುವ ಅಥವಾ “ಕೂಡಿಕೆ” ಮಾಡಿಕೊಳ್ಳುವ ಹಂತವನ್ನು ಸಂದರ್ಭಗಳಲ್ಲಿ ಇಟ್ಟುಕೊಂಡಿರುತ್ತಾರೆ. ಇಂತಹ ಸಂದರ್ಭಗಳನ್ನು ಚಾಚು ತಪ್ಪದೆ ಅಳವಡಿಸಿಕೊಂಡು ಜೀವನದಲ್ಲಿ ಬಾಳಬೇಕಾದ ಅನಿವಾರ್ಯತೆ ಇದೆ. ಈ

ಅನಿವಾರ್ಯತೆಯನ್ನು ತಂದುಕೊಂಡ ಮಹಿಳೆಗೆ ತನ್ನ ನಿರ್ಧಾರ ಸ್ಪಷ್ಟಪಡಿಸುವುದರಲ್ಲಿ ಸಾಕಷ್ಟು ಪ್ರಯತ್ನ ಮಾಡಿದ್ದಾಳೆ.

ಒಪ್ಪತ್ತು ಉಣಲಾರೆ, ನೆತ್ತಿ ಬೋಳಿಸಲಾರೆ
ಬಕ್ಕ ಮುಂಡ್ಯಾಗಿ ಇರಲಾರೆ ಅತ್ತೆವ್ವಾ
ನನ್ನ ಶೆಟ್ಟರ ಕೂಡ ಕಳುವವ್ವಾ

ಎನ್ನುವ ಮೂಲಕ ಸಂಪ್ರದಾಯವನ್ನು ಮೀರಿ ಅಲ್ಲಿಯ ಆ ಕ್ರೂರ ಸಮಾಜದ ವ್ಯವಸ್ಥೆ ಕಂಡು ಉಣಲಾರದೆ ನೆತ್ತಿ ಬೋಳಿಸಿಕೊಳ್ಳಲಾರೆ, ರಂಡಿಮುಂಡಿಯಾಗಿ ಬಾಳಲಾರೆ ಅತ್ತೆವ್ವಾ ನನ್ನ ಶೆಟ್ಟರ ಕೂಡ ಕಳಿಸು ಎಂದು ಹೇಳುವ ಮೂಲಕ ಅತ್ತೆಗೆ ವಿನಂತಿಸಿಕೊಳ್ಳುತ್ತಾಳೆ. ಹಾಗೆ ಯಾರಿಗೂ ನೀನು ಅಂಜಲಾರೆ ಇಂತಹ ಕ್ರೂರ ವ್ಯವಸ್ಥೆಯಲ್ಲಿ ಬಾಳುವುದು ದುರಂತ "ಉಡಿಕೆ" "ಕೂಡಿಕೆ" ಸಂಪ್ರದಾಯ ನಾನು ಒಪ್ಪಿಕೊಳ್ಳುತ್ತೇನೆಂದು ವಿನಮ್ರವಾಗಿ ಹೇಳಿಕೊಳ್ಳುತ್ತಾಳೆ. ಸಂಪ್ರದಾಯ ಕಟ್ಟು ಪಾಡುಗಳಿಗೆ ತಿರಾಂಜನೆ ನೀತಿ ಹೊಸ ಪರಂಪರೆಯಾದ ಸಮಾಜ ವ್ಯವಸ್ಥೆಯನ್ನು ಹೊಂದಬೇಕೆಂದು ಆಶ್ರಯ ಜನಪದ ಮಹಿಳೆ ಮಾಡಿರುವ ಸೌಹಾರ್ದದಲ್ಲಿ ಕಾಣಬಹುದಾಗಿದೆ.

ಹಗ್ಗಿಗೆ ಹೊಯ್ಯುವ ಮಳಿ ಸುಗ್ಗೀಗೆ ಹೊಯ್ಯಲಿ
ದುಂಡು ಮಲ್ಲಿಗೆ ಚಿಗುರು ಈ ಊರ
ಗಂಡ ಸತ್ತವರ ಮದುವೀಗೆ

ಎನ್ನುವ ಮೂಲಕ ಮರುವಿವಾಹ, ಮರುಮದುವೆಯನ್ನು ಸಹ ಆಕೆ ಸ್ವಾಗತಿಸಿಕೊಂಡು ಬಾಳಬೇಕು ಎಂದು ಆಶಯ ವ್ಯಕ್ತಪಡಿಸುತ್ತಾಳೆ. ಪುರುಷ ಪ್ರಧಾನ ವ್ಯವಸ್ಥೆಗೆ ಮಹಿಳೆ ತತ್ತರಿಸಿ ಹೋಗಿದ್ದಾಳೆ. ಆಕೆಯ ಆಶಯಗಳಿಗೆ ಧರ್ಮಶಾಸ್ತ್ರ, ಪುರಾಣ ಗ್ರಂಥಗಳು, ಸಂಪ್ರದಾಯ, ಶಿಷ್ಟಸಮುದಾಯವು ಸಹ ಇಂತಹ ಮದುವೆಯು ತಿರಸ್ಕರಿಸಿದಾಗ ಮಹಿಳೆ ಪ್ರತಿಭಟಿಸುವ ರೀತಿ ಹೀಗಿದೆ.

ಹೆಣ್ಣಿನ ಕಿಚ್ಚೋಗಿ ಸನ್ಯಾಸಿ ಮಠ ಬೆಂದೋ।
ಕನ್ಯೆ ಕಾಮದ ಮಠ ಬೆಂದೋ। ಹಾರುವರ
ಪಂಚಾಂಗ ಬೆಂದೋ ಹೊಗೆಯಾದೋ

ಎನ್ನುವ ರೊಚ್ಚು. ಮತ. ಪಂಚಾಂಗ. ಪುರಾಣಗಳ ಸುಳ್ಳಿನ ಕಂತೆಗಳನ್ನು ಹೇಳಿ ನಮಗೆ ಮೋಸ ಮಾಡುವ ಮಠಗಳನ್ನು ಮಹಿಳೆ ತನ್ನ ನಿಜವಾದ ಎದೆಯೊಳಗಡೆ ಅಡಗಿಕೂತ ಬೆಂಕಿಯಲ್ಲಿ ಸುಟ್ಟುಕೊಂಡು ಕುಳಿತಿದ್ದಾಳೆ.

ಮಹಿಳೆ ತನ್ನ ನೋವುಗಳನ್ನು ಹೊರಹಾಕುವಲ್ಲಿ ಸಫಲತೆ ಹೊಂದಿದ್ದಾಳೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸಹಿತ ಹೆಣ್ಣನ್ನು ಭೋಗದ ವಸ್ತುವನ್ನಾಗಿ ಮಾಡಿ ಸ್ವೀಕರಿಸಲಾಗುತ್ತಿದೆ. ಎಲ್ಲಿ ನೋಡಿದರಲ್ಲಿ ಕಾಮುಕ ದೃಷ್ಟಿಯೇ ತುಂಬಿ ತುಳುಕುತ್ತಿದೆ. ಭೋಗ ವಸ್ತುವನ್ನಾಗಿ ಎತ್ತಿಹಿಡಿದಿವೆ. ಪುರುಷ ಮಹಿಳೆಗೆ ಸ್ವಾತಂತ್ರ್ಯ ಆಶ್ರಯ ಕೊಡದೆ ಕಾಮುಕದ ಭಾವನೆಗಳಲ್ಲಿ ನೋಡುವ ವಿಶಿಷ್ಟ ಕ್ರಿಯೆ ನಾವು ಕಾಣುತ್ತೇವೆ. ಪುರುಷನ ಕಪಿಮುಷ್ಟಿಯಿಂದ ಪಾರಾಗುವುದೇ ಬಲುಕಷ್ಟ ಲೈಂಗಿಕತೆಯ ಕಿರುಕುಳ ಒಂದು ಕೂಡ ತಪ್ಪಿದ್ದಲ್ಲಿ ಮಹಿಳೆಗೆ ಬಾಲ್ಯದಿಂದಲೇ ಕಿರುಕುಳಗಳು ಪ್ರಾರಂಭವಾಗುತ್ತವೆ. ಇಂತಹ ಕಿರುಕುಳ ದೌರ್ಜನ್ಯಕ್ಕೆ ಅನಂತ ಮುಖಗಳು ಲೈಂಗಿಕ ಕಿರುಕುಳಗಳ ಮಧ್ಯದಲ್ಲಿ ಬಾಳಬೇಕಾದದ್ದು ಅತಿ ಸೋಜಿಗವೆನಿಸುತ್ತದೆ. ನಗರದ ಪ್ರದೇಶಗಳಲ್ಲಿ ಹೆಣ್ಣಿಗೆ ಒಂದು ತೆರನಾದ ಶೋಷಣೆಗಳು ಉಂಟಾದರೆ ಹಳ್ಳಿಗಾಡಿನ ಪ್ರದೇಶದಲ್ಲಿ ಆಗುವ ಶೋಷಣೆಗಳೇ ಬೇರೆ. ದುಡಿಯುವ ಮಹಿಳೆ ಹೊಲ ಗುಡ್ಡಗಾಡುಗಳಲ್ಲಿರುವ ಕೊಡುವ ಕಿರುಕುಳಗಳ ಅನೇಕ ರೀತಿಯಾಗಿವೆ. ವಿಕೃತ ಕಾಮುಕರ ಕೈಯಲ್ಲಿ ಸಿಕ್ಕ ಇಡೀ ದೇಹವನ್ನು ನುಚ್ಚು ನೂರಾಗಿಸುವಲ್ಲಿ ಸಫಲತೆ ಹೊಂದಿದ್ದಾರೆ. ಲೈಂಗಿಕ ಕಿರುಕುಳಗಳನ್ನು ಸದಾ ನಡೆಸಬೇಕಾದ ಅನಿವಾರ್ಯತೆ ಇದೆ. ಲೈಂಗಿಕ ಭಾವನೆಗಳನ್ನು ಮನುಷ್ಯನನ್ನು ವಿಕೃತಗೊಳಿಸುತ್ತವೆ. ಅವು ಅರಳಿಸಬೇಕಾದದ್ದು ಆದರೆ ಅವನ್ನೆಲ್ಲವು ಬಿಟ್ಟು ಲೈಂಗಿಕ ಚೇಷ್ಟೆಗಳಿಂದ ದೂರ ಸಲ್ಲಿಸಬೇಕಾದದ್ದು ಇದೆ. ಶೃಂಗಾರವಾದ ಹಾಡುಗಳ ಮೂಲಕ. ಮನಸ್ಸನ್ನು. ಭಾವನೆಗಳನ್ನು ಅರಿಯುವಲ್ಲಿ ಸಫಲತೆ ಹೊಂದಬೇಕಾಗಿದೆ. ಒಂದು ವೇಳೆ ತನಗೆ ಬೇಕಾದ ಮಹಿಳೆ ದೊರಕದಿದ್ದಾಗ ಗಂಡು ಹತ್ತು ಹಲವು ಪ್ರಯೋಗಗಳನ್ನು ಮಾಡುತ್ತಾನೆ. ಅನೇಕ ಹಿಂಸೆ ಪ್ರತಿಹಿಂಸೆ ಕೊಡಲು ಹಿಂಜರಿಯುವುದಿಲ್ಲ. ತನಗೆ ತೋಚಿದ ಹತ್ತು ಹಲವು ಸಂಗತಿಗಳನ್ನು ಅರಿತುಕೊಂಡು ಮುಂದೆ ಸಾಗುತ್ತಾನೆ. ತನ್ನ ಒಡಲಾಳದ ಕಾಮದ ಹಸಿವಿಗಾಗಿ ಸಮಯ ನೋಡಿ ಅತ್ಯಾಚಾರ ಇಲ್ಲವೆ ಆಕೆಯನ್ನು ಸಂಪೂರ್ಣವಾಗಿ ಸಮಾಜದಲ್ಲಿ ತಲೆ ಎತ್ತಿ ತಿರುಗದ ಹಾಗೆ ಮಾಡಿಕೊಳ್ಳುವ ಸಂಗತಿಗಳನ್ನು ನಾವು ಕಣ್ಣಾರೆ ಕಂಡಿದ್ದೇವೆ. ಜನಪದ ಸಾಹಿತ್ಯದಲ್ಲಿ ಅನೇಕ ಗಂಡು-ಹೆಣ್ಣಿನ ಸ್ಥಿತಿ ಗತಿಗಳು ನೋಡಿ ಅವುಗಳ ಕುರಿತು ಅನೇಕರು ಹಾಡುಕಟ್ಟಿದ್ದಾರೆ. ಇಲ್ಲಿ ಹೆಣ್ಣು ನಿರಾಕರಿಸಿದರೂ ಆಕೆಯನ್ನು ಬಲತ್ಕರಿಸುವ ರೀತಿ ಕಂಡು ಹೆಣ್ಣು ಪ್ರತಿಭಟಿಸುವ ಅವನನ್ನು ಛೀಮಾರಿ ಹಾಕಿ ಗುಡುಗುವ ಪ್ರಸಂಗಗಳು ಹತ್ತು ಹಲವು ಅವುಗಳು ಜನಪದ ಮಹಿಳೆ ಈ ರೀತಿ ಮಾಡಿದ್ದಾಳೆ.

ಮೂರು ಹಾಡಿನ ಮೂಳ। ಮುಕ್ಕಟ್ಟು ಬರಬ್ಯಾಡ
ಮೂಗಿಗೆ ಕವಡಿ ಪೋಣ್ಸೇನು। ಎಲೆ ಮೂಳ
ಊರಾಗ ನಿನ್ನ ಮೆರಸೇನು

ನಿಲ್ಲು ಅಲ್ಲೆ ಇರು ನೀನು ನನ್ನ ಸಹಿಹಕ್ಕೆ ಬಂದರೆ ನಿನ್ನಾ ಎಲ್ಲಾ ರೀತಿಯ ಅವಮಾನಿಸಿ ಊರಲ್ಲಿ ಮೆರವಣಿಗೆ ಮಾಡೆನೆಂಬ ಪ್ರತಿಭಟನೆಯ ಮನೋಧರ್ಮ ಎತ್ತಿ ಹೇಳುತ್ತಾಳೆ. ಮುಂದುವರೆದು ಪುರುಷನ ಸೊಕ್ಕು ಆರ್ಭಟ ನೆಲೆ ನೀತಿ ಕಂಡುಕೊಂಡ ಮಹಿಳೆ

ಹಾಡು ಬರತಾವಂತ ಏಕೇರಿ ಬರಬ್ಯಾಡ
ಏರೀದ ಗರ್ವ ಇಳಸೇನು। ಸೊರಟೂರ
ಅಗಸೇಲಿ ನಿನ್ನ ಹುಗಸೇನು

ಎನ್ನುವುದರಿಂದ ಹಾಡು ಬರುವಂತ ಶೃಂಗಾರದ ಹಾಡು ಹೇಳುತ್ತ ಗರ್ವದಿಂದ ಬರಬೇಡ ಆ ಗರ್ವ ಸೊಕ್ಕು ಎಲ್ಲವುಗಳನ್ನು ಇಳಸಿದೆ. ಅವನು ಊರ ಆಚೆಗೆ ಹೊರಟಾಗ ಅಗಸೇಲಿ ಹುಗಿದು ಬರಲೆ ಎಂಬ ಪ್ರತಿಭಟನೆ ಮಾತುಗಳು ಓದುಗರಿಗೆ ಸೆರೆ ಹಿಡಿಯುತ್ತವೆ. ಚಿಂತನೆ ಮಾಡಲು ಸದಾ ಹಾತೊರೆಯುತ್ತವೆ. "ಸಂಗವ ಮಾಡ್ಯಾಳ ನಿಮತಂಗಿ" ಎಂಬ ಹಾಡಿನಲ್ಲಿ ಪರಪುರುಷನೊಂದಿಗೆ.

ನೀಲಗಂಗಾ ಮಾತನಾಡುವುದನ್ನು ಕಂಡರೆ ತಿರಸ್ಕರಿಸಿದ್ದಾಳೆ. ಅಲ್ಲದೇ ತಾನು ವಿವಾಹವಾಗಿ ತಂಗಿಯಮೇಲೆ ಅನುಮಾನ ಸದಾ ಕಾಡುತ್ತಿರುತ್ತದೆ. ಹೆಣ್ಣಿಗೆ ತಂಗಿಯ ಅಣ್ಣನೇ ತನ್ನ ಗಂಡನ ಮೇಲೆ ಅನುಮಾನ ವ್ಯಕ್ತಪಡಿಸುತ್ತಾನೆ. ಜೊತೆಗೆ ಅನುಮಾನದಿಂದ ತಂಗಿಯನ್ನು ಕೊಲ್ಲುವುದು ಕೂಡಾ ಇದೇ ಹಾಡಿನಲ್ಲಿ ವ್ಯಕ್ತವಾಗಿದೆ. ಮಹಿಳೆ ಏನೇ ಆದರೂ ಸಹಿತ ಹೆಣ್ಣಿನ ಶೀಲದ ಬಗ್ಗೆ ಅನುಮಾನಪಡಬಾರದು. ಒಮ್ಮೆ ಅನುಮಾನ ಬಂತೆಂದರೆ ಸಾಕು ಆ ಅಪನಂಬಿಕೆ ಹುಸಿಗೊಳಸಬೇಕಾದ ಸಂಗತಿಯನ್ನು ಹೊರಹಾಕಲಾಗುತ್ತದೆ. ಇಂತಹ ದುರಂತಕತೆಗೆ ಕಾರಣನಾದ ಮಗಳ ನೋವು ಅಭಿವ್ಯಕ್ತಿಗಲು ಮಹಿಳಾ ಕಥೆಗಳು ಜನಪದ ಕಾವ್ಯದಲ್ಲಿ ಸದಾ ಜಾಗೃತವಾಗಿರುವುದನ್ನು ಕಾಣುತ್ತೇವೆ. ಮಹಿಳಾ ಶೀಲದ ಬಗೆಗೆ ಸದಾ ಎಚ್ಚರಿಕೆ ಹೊಂದಬೇಕಾಗಿದೆ. ಮಹಿಳಾ

ಜೀವನವೆನ್ನುವುದೇ ಗರಗಸದಂತಿದೆ ಅದು ಹೋಗುವಾಗಲೂ ಬರುವಾಗಲೂ ಸಹಿತ ಗರಗಸ ಹೊರಟು ಹೋಗುತ್ತದೆ.

ಪುರುಷನು ಕೂಡಾ ಮಹಿಳೆಯ ಬಗ್ಗೆ ಅಪಾರವಾದ ಸಂಶಯ ಹಾಗೂ ಅಪನಂಬಿಕೆ ಹೊಂದಿರುತ್ತಾನೆ. ಪುರುಷನ ಕ್ರೂರ ನೀತಿಗಳು ಮಹಿಳೆಗೆ ಮಾರಕವಾಗಿ ಕಂಡುಬರುತ್ತದೆ. ಸಮಾಜದ ಅನೇಕ ಕ್ರೂರ ವ್ಯವಸ್ಥೆಯ ಕತ್ತಿಯ ಮೇಲೆ ಮಹಿಳೆ ಜೀವನ ಸಾಗಿಸಬೇಕಾಗಿದೆ. ಎಷ್ಟೇ ಪಾತಿವ್ರತೆ-ಶೀಲತ್ವದಿಂದ ಬಾಳಬೇಕಾದ ಸಂಗತಿಗಳನ್ನು ಹೊಂದಿದ್ದರೂ ಸಹಿತ ಗಂಡಿನ ಸಂಪೂರ್ಣವಾದ ಸಂಶಯ ಹಾಗೂ ಅಪನಂಬಿಕೆ ಮಹಿಳೆ ದುರಂತಕ್ಕೆ ಈಡಾಗುವುದನ್ನು ನಾವು ಕಾಣುತ್ತೇವೆ. "ನೀಲಗಂಗಾ" ಎಂಬ ಹಾಡಿನಲ್ಲಿ ತುಂಬಾ ಸ್ವಾರಸ್ಯಕರವಾದ ಸಂಗತಿಯನ್ನು ಪ್ರತಿಪಾದಿಸಲಾಗುತ್ತದೆ. ತವರಿನಿಂದ ಆಕೆಯನ್ನು ಕರೆದುಕೊಂಡು ಹೋಗಲು ಬರುವ ಭಾವನು ತನ್ನನ್ನು ತಾನು ತನ್ನ ಮನೆಗೆ ಕರೆದೊಯ್ಯಲು ಸೊಸೆಗೆ ತವರಿಗೆ ಬರುತ್ತಾನೆ. ಇದರಿಂದ ತವರಿನವರೆಲ್ಲರೂ ನಂಬುಗೆಯಿಂದ ಭಾವನ ಜೊತೆ ತನ್ನ ಮಗಳನ್ನು ಕಳುಹಿಸಿಕೊಡುತ್ತಾರೆ. ಕಳುಹಿಸಿ ಕೊಟ್ಟಾಗ ಪ್ರೀತಿಯಿಂದ ಕರೆದು ಹೋಗಿ ಕಾಡುದಾರಿಯನ್ನು ಕರೆದೋಯ್ದನು. ಕಾಡುದಾರಿಯಲ್ಲಿ ಮೂಲದಾರಿ ತಪ್ಪಿಸಿ ಕಗ್ಗತ್ತಲು ಕಾಡಿನೊಳಗೆ ಒಯ್ದು ಆಕೆಗೆ ಬಲತ್ಕರಿಸುತ್ತಾನೆ. ಇಂತಹ ಬರ್ಬರವಾದ ದೌರ್ಜನ್ಯವನ್ನು ಆತ ಸ್ವತಃ ಭಾವನಾಗಿದ್ದರೂ ಮಾಡಿಕೊಟ್ಟು ಕಳಿಸುವುದು ದುರಂತದ ಚಿತ್ರಣವಾಗಿದೆ. ಅಲ್ಲದೇ ಸ್ವತಃ ಆಕೆಯನ್ನು ಬಲತ್ಕರಿಸಿದಲ್ಲಿ ಆಕೆಗೆ ಹಿಂಸೆಯನ್ನು ನೀಡುತ್ತಾನೆ. ಈ ಹಿಂಸೆ ಅವಮಾನ, ಶೀಲದ ಪಾವಿತ್ರ್ಯತೆ ಕೆಟ್ಟು ಹೋದಾಗ ಅದನ್ನು ಸಹಿಸದೇ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ತಿರಸ್ಕರಿಸುವುದು ಅವನ ಎದೆ ಎತ್ತಿ ನಡೆದಾಡುವುದಂತೂ ಸಾರ್ಥಯವೇ ಇಲ್ಲ. ಇಂತಹ ಅನೇಕ ಘಟನೆಗಳನ್ನು ಕಂಡುಕೊಂಡು ಮಹಿಳೆ ತನ್ನನ್ನು ತಾನೆ ಸಮರ್ಥಿಸಿಕೊಳ್ಳುತ್ತಾಳೆ.

ತನಗಾದ ಅನ್ಯಾಯವನ್ನು ಸರಿಪಡಿಸಿಕೊಳ್ಳಲು ಸಾಧ್ಯವೇ ಆಗುವುದಿಲ್ಲ. ಅತ್ಯಾಚಾರ ಮಾಡಿದ ಪ್ರಯುಕ್ತ ಹಳ್ಳದ ಮಡುವಿಗೆ ಹಾರಿ ಸಾಯುವ ಚಿತ್ರಣ ನೀಲಗಂಗಾ ಹಾಡು ಕೋಮಲತನವನ್ನುಂಟು ಮಾಡುತ್ತದೆ. ಪ್ರತಿಯೊಂದು ಹಂತದಲ್ಲೂ ಸಹಿತ ಆಕೆಯ ದುರಂತಮಯವಾದ ಬದುಕನ್ನು ಅಂತ್ಯಗೊಳಿಸಿಕೊಳ್ಳಲು ಪ್ರಯತ್ನಿಸಿದ್ದಾಳೆ. ಈ ಬಗೆಯ ಅತ್ಯಾಚಾರದ, ದೌರ್ಜನ್ಯ, ದಬ್ಬಾಳಿಕೆಗಳು ಒಂದಲ್ಲ ಎರಡಲ್ಲ ನೂರಾರು- ಅವುಗಳನ್ನೆಲ್ಲ ದೂರಿಕರಿಸಿಕೊಂಡು ನಿಂತುಕೊಂಡ ಅನೇಕ ಕುಟುಂಬಗಳಿವೆ. ಅನೇಕ ಮನೆತನಗಳಲ್ಲಿ ಹಾಡುಹಗಲೇ ಇಂತಹ ನೂರಾರು ದೌರ್ಜನ್ಯ ಅತ್ಯಾಚಾರ ನಡೆದುಕೊಂಡು ಬರುತ್ತಲೇ ಇರುತ್ತವೆ. ಎಷ್ಟೋಬಾರಿ ಮನೆ ಮನೆಗಳಲ್ಲಿ ನಡೆದ ದೌರ್ಜನ್ಯಗಳಲ್ಲಿ

ಕಂಡುಕಾಣದಂತೆ ಮಹಿಳೆಯರು ಬದುಕಬೇಕಾಗಿದೆ. ತಾವು ಅನುಭವಿಸಿಕೊಂಡ ನೋವು, ಯಾತನೆಗಳು ಅನುಭವಿಸಿ "ಬಿಸಿ ತುಪ್ಪನುಂಗಿದ" ಅನುಭವ ಅವರಿಗಾಗಿದೆ. ಇದರಿಂದ ಬೇಸತ್ತು ಹೋದ ಮಹಿಳೆ ಹೆದರಿ ಬಾಯಿ ಬಿಡದೇ ನೋವು ನುಂಗಿಕೊಂಡು, ಬಾಳಬೇಕಾದ ಅನಿವಾರ್ಯತೆಯಿದೆ.

ಇಲ್ಲಿರುವ ಪ್ರತಿ ಹಾಡುಗಳು ಸಹ ಅಕ್ಕನ ಮನೆಯಲ್ಲಿ ತಂಗಿ, ಕೆಮ್ಮುಗಲಿಲ್ಲ ಹೆಸರಿಲ್ಲ ಎನ್ನುವ ಗೀತೆಗಳಲ್ಲಿ ಮಹಿಳಾ ಪರವಾದ ಅಂಶಗಳು ಎದ್ದು ಕಂಡು ಬರುತ್ತವೆ. ಇಲ್ಲಿ ದೌರ್ಜನ್ಯ, ದಬ್ಬಾಳಿಕೆ ಹಿಂಸೆಯೆಂಬ ಪ್ರತಿರೋಧಗಳು ಸದಾ ಜಾಗೃತಗೊಳ್ಳುತ್ತವೆ. ಅಕ್ಕನ ಮನೆಗೆ ತಂಗಿ ಸಹಾಯ ಮಾಡಲು ಬರುತ್ತಾಳೆ. ಹೆರಿಗೆಯ ಸಂದರ್ಭದಲ್ಲಿ, ಗರ್ಭಿಣಿಯೊಂದಿಗೆ ಅಥವಾ ಆರೋಗ್ಯ ಸರಿ ಇಲ್ಲದ ಕಾರಣದಿಂದ ಅಕ್ಕನಿಗೆ ಸಹಾಯ ಮಾಡಲು ತಂಗಿ ಸ್ವತಃ ಬರುತ್ತಾಳೆ. ಆಗ ಅಕ್ಕನ ಗಂಡನಸ ದೌರ್ಜನ್ಯ ಕಾಮುಕತೆಗೆ, ಲೈಂಗಿಕ ಕಿರುಕುಳಕ್ಕೆ ಬಲಿಯಾಗಿ ತಂಗಿಯೂ ದೌರ್ಜನ್ಯಕ್ಕೊಳಗಾಗುತ್ತಾಳೆ. ಇದನ್ನೆಲ್ಲ ಸಹಜವಾಗಿ ಗ್ರಹಿಸಿಕೊಂಡು ಮಹಿಳೆ ತನ್ನ ಗಂಡನ ಮೂಲಕವೇ ತಂಗಿಗೆ ಅಪಮಾನ, ಅವಮಾನ ಕಾರ್ಯಗಳು ಆಗಿರುವುದನ್ನು ಸ್ವತಃ ಅಕ್ಕನೇ ಒಪ್ಪಿಕೊಳ್ಳುತ್ತಾಳೆ. ತಂಗಿ ಬಸಿರಾದಾಗಲೂ ಸಹ ಹೆದರುತ್ತಾಳೆ. ಗಂಡನ ಬಗ್ಗೆ ಅನುಮಾನ ಸಂಶಯಗಳು ಸದಾ ಹಾತೊರೆಯುತ್ತವೆ. ತನ್ನ ತಂಗಿಯ ಭವಿಷ್ಯದ ನಾಳಿನ ದಿನಗಳನ್ನು ಕನಸುಕಾಣುತ್ತಾಳೆ, ಚಿಂತನೆಗೆ ಅಕ್ಕ ತಪಡಗಿತ್ತಾಳೆ. ಇಲ್ಲಿ ಸ್ತ್ರೀ ಪ್ರತೀಕ ಜೊತೆಗೆ ಸ್ತ್ರೀ ಸಂವೇದನೆ ಅಲ್ಲದೇ ಮಹಾ ಪ್ರತಿಭಟನೆಯು ಕಾಣಸಿಗುತ್ತದೆ.

ಕಂದನ ಸಲುವಾಕೆ ತಂಗೀಯ ಕರೆತಂದೆ
ತಂತ್ಯಮ್ಮಗೆರಡ ಬಗೆದೆಲ್ಲೊ। ರಾಯರೆ
ಬಂಡು ಮಾಡಲೇ ಸಭೆಯೊಳಗೆ

ಎನ್ನುವ ಮೂಲಕ ಅಕ್ಕ ತನ್ನ ತಂಗಿಯ ಬಗೆಗೆ ಹೊಂದಿದ ಅಪಾರ ಪ್ರೀತಿ ನಂಬುಗೆಯ ಸೂಕ್ಷ್ಮವಾಗಿ ಹೊರಹಾಕುತ್ತಾಳೆ. ತನ್ನ ಸ್ವತಃ ಗಂಡನೇ ಮಾಡಿಕೊಂಡ ದ್ರೋಹವನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ.

ನನ್ನ ತಂಗಿಗೆ ನಾನು ನನ್ನ ಕಂದನನ್ನು ಎತ್ತಿ ಮುದ್ದಾಡಿಸಲು ಸಹಾಯಕಳಾಗುತ್ತಾಳೆಮದು ಕರೆತಂದರೆ ಅವಳನ್ನು ನೀನು ಬಲತ್ಕರಿಸಿ ಬಿಟ್ಟು ತಂಗಿಗೆ ಎರಡು ಬಗಿದು ನಾನು ಹೇಗೆ ಬಾಳಲಿ ಹೇಗೆ ನೋಡಲಿ ಎಂದು ಆಶಯ ವ್ಯಕ್ತಪಡಿಸುತ್ತಾಳೆ.

ತಂಗಿಗಾದ ಅನ್ಯಾಯವನ್ನು ಪ್ರತಿಭಟಿಸಲು ಮುಂದಾಗುತ್ತಾಳೆ. ತಂಗಿ ಸ್ವತಃ ನನ್ನಿಂದ ಯಾವ ತಪ್ಪು ಕೂಡಾ ಆಗಿಲ್ಲ. ನಾನು ಇದರಿಂದ ನೋವು ಅನುಭವಿಸಿದ್ದೇನೆ. ನನ್ನಿಂದ ಮಾತ್ರ ನನಗೇನು ಆಗುವುದಿಲ್ಲವೆಂದು ಹೇಳುತ್ತಾಳೆ. ನಾನು ಕೈಗೊಂಡ ನಿರ್ಧಾರವನ್ನು ಆಕೆ ಪ್ರಕಟಿಸುತ್ತಾಳೆ. ಯಾವುದಕ್ಕೂ ಅಂಜದೇ ಅಳುಕದೇ ಹೋರಾಟ ನಡೆಸುವ ಬಗೆ ವಿಶಿಷ್ಟವಾದುದು. ಸಮಾಜಕ್ಕೆ ಬೇಕಾಗುವ ಅವುಗಳನ್ನು ಹೆದರಿಸಲು ಮುಂದೆ ಬಂದಿದ್ದಾಳೆ. ಸಮಾಜಕ್ಕೆ ಸವಾಲು ಹಾಕುವ ಮೂಲಕ ಸ್ವತಹ ತಂಗಿಯೇ ಮುಂದೆ ಬರುತ್ತಾಳೆ. ತನ್ನ ತಾನು ಅರಿತುಕೊಂಡು ಯಾವುದಕ್ಕೂ ಅಂಜದೇ ಭಾವನೊಂದಿಗೆ ಕೈ ಜೋಡಿಸಲು ಮುಂದಾಗುವ ಪರಿ ಹೀಗಿದೆ.

ಕಕ್ಕೆ ಕಾಯದಾಗ ಛಿಕ್ಕೆ ಫಲ ಬಿಟ್ಟಾಗ
ನಾ ಗಂಡು ಮಗನ ಹಡೆದಾಗ। ಭಾವಯ್ಯಾ
ಆಗ ಪಾಲಿಗೆ ಬರತೀನಿ

ಎಂಬ ತನ್ನ ಮನದಿಚ್ಛೆಯನ್ನು ಹೊರಹಾಕುತ್ತಾಳೆ. ನಾನು ಬಯಸಿದ್ದೆಲ್ಲ ನಿನ್ನಿಂದಲೇ ಫಲ ಬಿದ್ದು ನನಗೆ ಗಂಡು ಮಗನನ್ನು ಹಡೆದರೆ ಮಾತ್ರ ನಾನು ನಿನ್ನಲ್ಲಿ ಪಾಲುಕೇಳಲು ಬರುತ್ತೇನೆ ಎಂಬ ಆಶಯ ಕನಸು ಹೊರಹಾಕುತ್ತಾಳೆ. ತನ್ನ ಹಕ್ಕು ಸ್ಮರಿಸುತ್ತಾಳೆ ಅಕ್ಕನ ಮನೆಯಿಂದ ಅನ್ಯಾಯವಾದರೂ ಅದನ್ನು ಹೊರ ತೊರುಗೊಡದೇ ಸ್ವತಃ ಹಾಗೇ ಹೋಗುತ್ತಾರೆ. ಮಹಿಳೆಯಲ್ಲೂ ಹುದುಗಿದ ಅಂತಃ ಸತ್ವ ತೋರಿಕೆಯಿಮದಲ್ಲ ಅದು ಎಲ್ಲರಿಗೂ ಬೇಕಾಗುವ ಹಾಗೇ ಕಂಡು ಬಂದಿರುವುದು ಒಂದು ವೈಶಿಷ್ಟ್ಯವಾಗಿದೆ. ಮನುಷ್ಯನ ಜೀವನವನ್ನು ಸದಾ ಕಾಣಬೇಕು ಎಂಬ ನುಡಿಯನ್ನು ಕಂಡುಕೊಳ್ಳುತ್ತಾಳೆ. ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಪಾತಿವ್ರತ್ಯೆ-ಶೀಲ ಸತ್ಯವನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ಅರಿತು ಮಹಿಳಾ ಮುಖ್ಯವಾಗಿ ಪ್ರತಿಪಾಲಸುತ್ತಾಳೆ. ಮಹಿಳಾ ಮುಖ್ಯವನ್ನು ಮೀರಿ ನಡಕೊಂಡು ಬಂದಾಗ ಸಮಾಜದಲ್ಲಿ ಪಾತಿವ್ರತ್ಯ ಶೀಲ ಆಚರಣೆ ನೀತಿ ಬಾಹಿರವೆಂದು ಕಂಡಾಗ ಅದನ್ನು ತಿರಸ್ಕರಿಸುವದು ಮನೋಧರ್ಮ ಕಂಡು ನೋಡುತ್ತಾನೆ.

ಮಹಿಳೆಯ ಕಟ್ಟು ಪಾಡುಗಳನ್ನು ಕಂಡುಕೊಂಡ ಮಹಿಳೆ ಈ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ತನ್ನ ತನ ಕಳೆದುಕೊಳ್ಳುವ ಸಂಗತಿ ಹೊರಹಾಕಿದ್ದಾಳೆ. ಗಂಡು ಸ್ವೇಚ್ಛಾಚಾರಿಯಾಗಿದ್ದುಕೊಂಡು, ಬಾಳಿದರೂ ಸಹ ಅದನ್ನು ಪ್ರಶ್ನಿಸುವ ತಿರಸ್ಕರಿಸುವ ಹಕ್ಕು ಹೆಂಡತಿಗೆ ಇಲ್ಲ. ಅದೇ ಹೆಂಡತಿ ಸ್ವೇಚ್ಛಾಚಾರಿಯಾದರೇ ಸ್ವತಂತ್ರ್ಯವಾಗಿ ಬಾಳಬೇಕೆಂಬ ಆಶಯವನ್ನು ಹೊಂದಿರುತ್ತಾಳೆ. ತನಗೆ ಅಂದರೆ ಗಂಡನಿಗೆ ಸಂಪೂರ್ಣವಾಗಿ ಶ್ರದ್ಧೆಯಿಂದ

ಇರಬೇಕು. ಸ್ವಾಭಿಮಾನದಿಂದ ಬದುಕಬೇಕೆಂಬ ಆಶಯವನ್ನು ವ್ಯಕ್ತ ಪಡಿಸುತ್ತಾರೆ. ಹೆಂಡತಿ ಸಂಪೂರ್ಣಶೀಲ ಪಾವಿತ್ರ್ಯದಲ್ಲಿ ಒಂದೇ ಆಗಿರಬೇಕು ಎಲ್ಲೂ ಕೂಡಾ ನಿಷ್ಠೆಯಿಂದಿರಬೇಕು. ಹೆಂಡತಿ ಸದಾ ಗಂಡನೊಂದಿಗೆ ಬಾಳಬೇಕು ತನ್ನೊಳಗಡೆ ತನ್ನ ಮಾತಿಗೆ ತಾವು ನಡೆದುಕೊಂಡು ಬರಬೇಕು. ಪ್ರೇಮ-ಕಾಮದ ನೈಸರ್ಗಿಕವಾದ ಪ್ರಕೃತಿಗೆ ಆಕರ್ಷಣೆಯಾಗಬೇಕು. ಪ್ರೇಮ-ಕಾಮದ ಬಗೆಗೆ ಗಂಡು-ಹೆಣ್ಣು ಬೇಧಭಾವ ತಳ್ಳಬೇಕು. ಮದುವೆಯಾದ ಮೇಲಂತೂ ಮಹಿಳೆ ಮಾತ್ರ ಹಲವಾರು ನಿಷ್ಠೆಗಳಿಂದ ಬಾಳಬೇಕು. ಗಂಡನ ಮನೆ-ಗಂಡನನ್ನು ಸಂಪೂರ್ಣವಾಗಿ ನಡೆಯಿಸಿಕೊಂಡು ಹೋಗುತ್ತಾರೆ. ಹೆಣ್ಣಿನ ಅಗ್ನಿದಿವ್ಯದ ಸಮುದ್ರ ಬದುಕನ್ನು ಅನಾವರಣಗೊಳಸಬೇಕಾಗಿದೆ. ಜನಪದ ಕಾವ್ಯದಲ್ಲಿ ಪಾತಿವ್ರತ್ಯ. ಶೀಲ. ಸಂಸ್ಕಾರದ ಕಟ್ಟು ಪಾಡುಗಳನ್ನು ಮುರಿದುಹಾಕಿ ಜೀವ ಪರವಾದ ಸಂಸ್ಕೃತಿಯನ್ನು ಬಾಳಸುತ್ತಾರೆ. ಜೀವಪರವಾದ ಸಂಸ್ಕೃತಿಯನ್ನು ಹೊರಹಾಕುತ್ತಾರೆ. ಪ್ರೇಮ-ವಿಚಾರಧಾರೆಗಳನ್ನು ಒಳಗೊಂಡು ದಾಂಪತ್ಯ ಜೀವನವನ್ನು ಕಾಣುತ್ತೇವೆ. ದಾಂಪತ್ಯಲದಲಿ ಸರಸ-ವಿರಸಗಳು ಸಹ ಏಕಕಾಲಕ್ಕೆ ಹೊಂದಿಕೊಂಡು ನಡೆಸಬೇಕಾಗಿದೆ. ಮಹಿಳೆ ತನ್ನ ಮನದ ಪ್ರೀತಿ ಬಯಸಿ ಪುರುಷನೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಾಳೆ. ಅವರ ಪ್ರೀತಿ-ಸ್ನೇಹ-ಪ್ರೇಮಗಳ ಸಂಬಂಧವು ಸಹ ಅಂತರಂಗದಿಂದ ಬಹಿರಂಗಗೊಳಸಲಾಗಿದೆ.

ಪಂಜರದ ಗಿಣಿ ನಾನು ಬರಲಾರೆ ತಾವಿಲ್ಲ
ದನಿತೋರಲಾರೆ ತೆರನಿಲ್ಲ ನನ ಗೆಣೆಯ
ಗಿಣಿಯಾಗಿ ಬಾರೋ ಹೊಸಲೀಗೆ

ಎನ್ನುವ ಮೂಲಕ ಪಂಜರದ ಗಿಣಿ ಪಂಜರದೊಳಲ್ಲ ಎಂಬ ಕನಕದಾಸರ ಹಾಡಿನಂತೆ ಮಹಿಳೆ ಇಲ್ಲಿ ದಾಖಲಿಸಿದ್ದಾರೆ. ಪಂಜರದಲ್ಲಿ ಇರುವ ಹಾಗೆ ದನಿತೋರಲಾರದೇ ತರನಿಲ್ಲ ನೀನು ಗಿಣಿಯಾಗಿ ಬಾರೋ ಎಂದ ಪ್ರೀಯಕರನನ್ನು ಕರೆಯುವ ರೀತಿ ಕುಡ ಅನನ್ಯವಾಗಿದೆ. ಇಲ್ಲಿ ಜನಪದದ ಮಹಿಳೆ ತನ್ನ ಕಾನೂನು ಬಾಹಿರ ಹಾಗೂ ಮನುಷ್ಯನ ವಿವಾಹಬಾಹಿರ ಕ್ರಮ ಪಾತಿವ್ರತ್ಯದ ಉಲ್ಲಂಘನೆ ಮಾಡುವ ಮೂಲಕ ತಿರಸ್ಕರಿಸುವ ರೀತಿ ಇಲ್ಲಿ ದಾಖಲಾಗಿದೆ.

ಸೂಚ್ಯವಾಗಿ ಜನಪದ ಮಹಿಳೆ ಸೂಚಿಸುವ ಮೂಲಕ
ದನಿ ಹಂಗೆ ತೋರಲಿ ಕದ ಹಂಗೆ ತೆರೆಯಾಲಿ
ಮಗ್ಗುಲಲ್ಲವನೆ ಮನೆ ಪುರುಷ ಎಲೆ ಗೆಣೆಯ
ಮಗ್ಗ್ಯಾಗಿ ಬಾರೋ ತುರುಬೀಗೆ

ಎನ್ನುವ ಮೂಲಕ ಮಹಿಳೆಯ ಧೈರ್ಯ ಸಾಹಸ ಅವಳಲ್ಲಿರುವ "ಮುಡಿಯ ಮಲ್ಲಿಗೆ" ಯಾಕೆ ಮುಡಿ ಮೈಬಿಟ್ಟುಕೊಂಡಂತೆ ಆ ಕೆಲಸ ಕಾರ್ಯಗಳು ಅರಿಯಬಹುದಾಗಿದೆ. ಅವಳಲ್ಲಿ ಅಡಗಿದ ಪ್ರೀತಿ ಆಳ ವಿಸ್ತಾರಗಳು ಸಹ ಇಲ್ಲಿ ದಾಖಲಾಗಿವೆ. ಇಲ್ಲಿಯ ಪ್ರಣಯ, ಪ್ರೀತಿ, ಪ್ರೇಮಗಳನ್ನು ಹೊರಹಾಕಲು ತಮಗೆ ಬೇಕಾದ ಸೊಪ್ಪು, ಸೌದೆ ಕಟ್ಟಿಗೆ ತರಲು ಕಾಡಿಗೆ ಹೋದಾಗ ಅಲ್ಲಿಯೇ ಪ್ರಣಯಿಗಳು ಒಂದಾಗಿ ಹೋಗುತ್ತಾರೆ. ವಿವಾಹ ಪೂರ್ವದಲ್ಲಿ ಕಾನೂನು ಬಾಹಿರವಾಗಿ ನಡೆಸುವ ಪಾತಿವ್ರತ್ಯ ಉಲ್ಲಂಘನೆ ಎತ್ತಿ ಹೇಳುತ್ತಾಳೆ. ತನ್ನ ಪ್ರೀತಿ–ಪ್ರೇಮಗಳು ಬಹಿರಂಗವಾಗಿ ಹೊರಹಾಕಲಾಗಿದೆ. ಹೊಳೆಯ ನೀರು ಹೊಸದು ಬರುವ ಹಾಗೆ ತೇಲಸಿ ಹೋಗುವ ಮುಂದೆ ಬರುತ್ತವೆ.

ಇಂತಹ ಕಥನ ಗೀತೆಗಳಲ್ಲಿ ಬಹುಪಾಲು ಪ್ರೀತಿ ಪ್ರಣಯಗಳು ಕಥನ ಗೀತೆ ಹರೆಯವದನ್ನು ಹೊರಹಾಕಿವೆ. ಮಹಿಳೆ ಗಂಡುಗಳ ನಡುವೆ ಕಾಣುವ ಪ್ರೀತಿ–ಪ್ರೇಮ ಮಾತುಗಳನ್ನು ಸೂಕ್ಷ್ಮವಾದ ರೀತಿಯನ್ನು ಇಲ್ಲಿ ದಾಖಲಿಸಲಾಗಿದೆ.

ನಾ ನಿನ್ನ ತರುವಾಗ ನೀನು ಸಣ್ಣಾವಳಲ್ಲೇ
ಈಗೆಲ್ಲಿ ಕಲಿತೆ ಹೊಸ ಮಾತ। ನನ ರಂಬೆ
ನುಡಿ ಬಿಟ್ಟು ನೀರು ಕೊಡ ಬಾರೆ

ಎನ್ನುವ ಮೂಲಕ ಅವಳ ಮನವೊಲಿಸುವ ನಾಟಕವನ್ನು ಆಡುವುದು ಕಾಣುತ್ತದೆ. ಪ್ರಾಯದ ರೀತಿ ಗಂಡು ಹೆಣ್ಣು ಬಾಲೆಯರು ಚಿತ್ರಣಕಾಣುತ್ತವೆ. ಇಲ್ಲಿ ಹಿರಿಯರ ಇಚ್ಛೆಯಂತೆ ಬಾಳುತ್ತಾರೆ.

ಕಥನ ಗೀತೆ ಹೊಸದಾರಿಯನ್ನು ಕಂಡುಕೊಳ್ಳಲು ಸಾಧ್ಯವಾಯಿತು. ಹದಿಹರೆಯದ ವಯಸ್ಸಿಗೆ ಬಂದ ಗಂಡು ಹಿರಿಯರ ಹಾಗೂ ದೈವದವರ ಕಲ್ಪನೆಯ ಒತ್ತಾಯದ ಮೇರೆಗೆ ಬಾಲೆಯನ್ನು ಮದುವೆಯಾಗುತ್ತಾರೆ. ಪತ್ನಿಯ ಮನೆಗೆ ಬಂದ ಗಂಡ ಕೆಲದಿನ ಅಲ್ಲೆ ಉಳಿದು ನಂತರ ಬೇಟೆಯಾಡಿ ಬರುತ್ತೇನೆಂದು ಕಾಡಿಗೆ ಹೋಗುತ್ತಾನೆ. ಕಾಡಿಗೆ ಹೋದ ಮೇಲೆ ಹಿಂದಿರುಗಿ ಬರದೆ ಕೆಲ ದಿನಗಳಾದವು ನಂತರ ಕೆಲ ವರ್ಷಗಳೇ ಗತಿಸಿದವು ತದನಂತರ ಮದುವೆಯಾದ ಹುಡುಗಿ ಪ್ರಾಯಕ್ಕೆ ಬರುತ್ತಾಳೆ.

ಪ್ರಾಯಕ್ಕೆ ಬಂದಾಗ ತನ್ನ ಗಂಡನಿಗಾಗಿ ಕಾಯುತ್ತಾಳೆ. ಇಂದಿಲ್ಲ ನಾಳೆಯೇ ಬಂದೆ ಬರುತ್ತಾನೆ ಕೊನೆಗೆ ಅವಳ ಆಸೆಗಳು ನುಚ್ಚು ನೂರಾದವು. ತನ್ನ ತಾನು ಗಂಡನ ಮನೆಯಲ್ಲಿ ಕಾಲ ಕಳೆಯುತ್ತಿದ್ದ ವಿರಹದ ವ್ಯಥೆಯನ್ನು ಹೊಂದಿದ ಆಕೆ ಅದರೊಳಗಡೆ ನಿತ್ಯ ಮುಳುಗುತ್ತಾಳೆ. ಅತ್ತೆಯ ಮನೆಯಲ್ಲಿ ಗಂಡನಿಗಾಗಿ ಪರಿತಪಿಸುವ ಹಂತಗಳು ನೂರಾರು ಕಾಣಸಿಗುತ್ತದೆ. ಆ ಹೊತ್ತಿಗೆ ಈಕೆಯ ಮನಸ್ಥಿತಿ ಅರಿತುಕೊಂಡ ಯುವಕನ ಪರಿಚಯವಾಗುತ್ತದೆ. ಆ ಯುವಕನೊಂದಿಗೆ ಈಕೆಯು ಅತಿ ಸಲಿಗೆಯಿಂದ ವರ್ತನೆ ಮಾಡುತ್ತಾಳೆ. ಇಬ್ಬರು ಕೆಲ ದಿವಸಗಳ ಕಾಲ ಅನ್ಯೋನ್ಯತೆಯಿಂದ ಇರುತ್ತಾರೆ. ಪರಿಚಯ ಪ್ರೇಮವಾಗಿ ಬೆಳೆದು ಬರುತ್ತದೆ. ಪ್ರೇಮ-ಕಾಮವಾಗಿ ಕಾಮದ ಸುಳಿಗೆ ಒಬ್ಬರನ್ನೊಬ್ಬರು ಹೊಂದಿಕೊಳ್ಳುತ್ತಾರೆ. ಲೈಂಗಿಕ ಕ್ರಿಯೆಗೆ ತೊಡಗಿ ತಮ್ಮನ್ನು ತಾವು ಅರಿತುಕೊಳ್ಳುತ್ತಾರೆ. ತನ್ನ ಗಂಡನ ಬರುವಿಕೆಯನ್ನು ಆಕೆ ನೆನಪು ಆರುತ್ತಾಳೆ. ಪ್ರೇಮ-ಕಾಮದ ನಡತೆ ಗಂಡನನ್ನು ದಿನದಿಂದ-ದಿನಕ್ಕೆ ನೆನಪು ಆರಿ ಹೋಗುತ್ತದೆ.

ಇದೇ ಸ್ಥಿತಿಯಲ್ಲಿ ತನ್ನ ಹೆಂಡತಿ ಹಾಗೂ ಪ್ರಿಯಕರ ಅನ್ಯೋನ್ಯವಾಗಿ ಬಾಳ್ವೆ ಮಾಡುತ್ತಾ ಸಾಗುತ್ತಾರೆ. ಇತ್ತ ಗಂಡ ಬೇಟೆಗೆ ಹೋದವನು ಕೊನೆಯ ಘಟ್ಟದಲ್ಲಿ ಹಿಂದಿರುಗಿ ಬರುತ್ತಾನೆ. ಅಡವಿ ಬೆಟ್ಟಕ್ಕೆ ಹೋದವ ಮರಳ ಬರುತ್ತಾನೆ. ಗಂಡ ಮನೆ ಪ್ರವೇಶಿಸಿದರೆ ಆತನಿಗೆ ನೀರು ಕೊಟ್ಟು ಗೌರವಿಸುವ ಸಂಪ್ರದಾಯವಿದೆ. ಆದರೆ ಇಲ್ಲಿ ಹೆಂಡತಿ ಮನೆಗೆ ಹಿಂದಿರುಗಿ ಬಂದ ಗಂಡನನ್ನು ತಿರಸ್ಕರಿಸುತ್ತಾಳೆ. ಅವನಿಗೆ ನೀರು ಕೊಡುವುದಷ್ಟೇ ಅಲ್ಲ ಅವನನ್ನು ಒಳಗೆ ಕರೆಯದೇ ಒಳಗೆ ಕುಳಿತುಕೊಳ್ಳುತ್ತಾಳೆ. ಆಕೆ ತನ್ನ ಗಂಡನೇ ವಂಚನೆ ಮಾಡಿದ್ದಾನೆಂದು ಹೇಳುತ್ತಾಳೆ. ಗಂಡನನ್ನು ತಿರಸ್ಕರಿಸುತ್ತಾಳೆ. ಅವಳ ಮನಸ್ಸಿನಲ್ಲಿ ಸದಾ ಗಂಡನ ನೆನಪು ಆರಿ ಹೋಗುತ್ತದೆ. ಅಲ್ಲದೆ ಅವಳಿಗೆ ಸಂಪೂರ್ಣವಾಗಿ ಗಂಡ ದೂರವಾಗಿ ಗೆಣೆಕಾರನೆ ಮನಸ್ಸು ಮಂದಿರದಲ್ಲಿ ತುಂಬಿ ತುಳುಕುತ್ತಾನೆ. ಮೊದ-ಮೊದಲು ಸಹ ಗಂಡನ ಬಿಟ್ಟ ಮನಸ್ಸು ಬೇರೆಡೆ ಹರಿಯಲು ಬಿಡಲು ಕೊನೆಗೆ ತನ್ನ ತಾನು ಮರೆಯುತ್ತಾಳೆ. ಗೆಣೆಕಾರನೆ ಅವಳ ಮನಸ್ಸು ಹೃದಯದಲ್ಲಿ ತುಂಬಿ ತುಳುಕುತ್ತಾನೆ. ಸಂಪ್ರದಾಯದಂತೆ ನಿರಾಕರಿಸುವ ಗುಣ ಕಲಿಯುತ್ತಾಳೆ. ತದನಂತರದಲ್ಲಿ ಗಂಡನೊಂದಿಗೆ ಮಾತಿಗೆ ಮಾತುಬೆಳೆಸಿ ಎದುರುತ್ತರ ಕೊಡುತ್ತಾಳೆ ಆಗ ಎಲ್ಲಿಗೆ ಹೋಗಿದ್ದೆ ಏನು ಮಾಡಿದೆ ಎಂಬ ಆಶಯವನ್ನು ಕಂಡರೆ "ಬಳೆಯ ತೋಳೊಳಗೆ ಒರಗಿದ್ದ" ಎಂಬ ಮಾತುಕೇಳಿ ಅದರಿಂದ ಆಕೆಯ ಮನಸ್ಸು ಹೇಸಿ ಹೋಗುತ್ತದೆ ಆಗ ಪ್ರತಿಭಟನೆ ಬಂಡಾಯಕ್ಕೆ ತಿಲಾಂಜನೆ ನೀಡುತ್ತಾಳೆ.

ನಾನು ನಿನ್ನ ತರುವಾಗ ನೀನು ಸಣ್ಣವಳಲ್ಲೇ
ಈಗೆಲ್ಲಿ ಕಲಿತೆ ಹೊಸ ಮಾತ। ನನ ರಂಬೆ
ನುಡಿ ಬಿಟ್ಟು ನೀರ ಕೊಡಬಾರೆ

ಎಂದು ಹೇಳುವುದರ ಮೂಲಕ ಆಕೆಯ ಮನಸ್ಸು ಒಲಿಯುವಂತೆ ಮಾಡುತ್ತಾನೆ. ನೀನು ನಾನು ಮದುವೆಯಾದಾಗ ಸಣ್ಣವಳಿದ್ದೆ. ಈಗ ರಂಬೆಯಾಗಿ ಬೆಳೆದಿರುವೆ ಹೀಗಿರುವಾಗ ನೀರು ಕೊಡಬೇಕು ಎಂದು ಹತ್ತಿರ ಕರೆಯುವ ಸಾಕಷ್ಟು ಪ್ರಯತ್ನಿಸುತ್ತಾನೆ. ಅವನ ಮಾತುಗಳನ್ನು ಕಂಡುಕೊಂಡಾಗ

ಹುಟ್ಟಿದ ಮಲ್ಲಿಗೆ ಹುಟ್ಟಿದ್ಹಂಗ ಇರುವೋದೇ
ಮತ್ತೊಂದು ಗೇಣು ಬೆಳೆದಾರೆ। ಹೂವರಳಿದರೆ
ಎಗರಿದ್ದ ಜಾಣ ಬಿಡಿಸಾನೆ

ಆಕೆಯು ಗಂಡನಿಗೆ ಕೊಡುವ ಉತ್ತರದಲ್ಲಿ ಮಾರ್ಮಿಕತೆ ಇದೆ ಇಲ್ಲಿಯೇ ಹೊಸದೊಂದು ಕೊಡುಗೆಯು ಕೊಡುತ್ತಾಳೆ. ಮಲ್ಲಿಗೆ ಹುಟ್ಟಿದ್ಹಂಗೆ ಹಾಗೆ ಇರುವುದಿಲ್ಲ ಅನು ನೋಡಿದರೆ ಕೂಡಲೇ ಜಾಣನಾದವನು ಬಿಡಿಸಿಕೊಳ್ಳುತ್ತಾನೆ ಎನ್ನುವ ಮೂಲಕ ತಾನು ನಿನಗಾಗಿ ಕಾದು-ಕಾದು ಸುಸ್ತಾಗಿ ಕೊನೆಗೆ ಬೇರೊಬ್ಬ ಯುವಕನೊಂದಿಗೆ ಸಂಬಂಧ ಬೆಳೆಸಿದ್ದನ್ನು ಪರೋಕ್ಷವಾಗಿ ಎತ್ತಿ ಹೇಳುತ್ತಾಳೆ. ಪುರುಷ ಪ್ರಧಾನ ಸಂಸ್ಕೃತಿ ತನ್ನ ಹೆಂಡತಿ ತಾನು ಹೇಗೆ ಇರುತ್ತಾಳೋ ಹಾಗೆ ಇರಬೇಕೆಂದು ಬಯಸುತ್ತಾನೆ. ಆದರೆ ಇಲ್ಲಿ ಜನಪದ ಮಹಿಳೆ ಸಂಪೂರ್ಣವಾಗಿ ತಿರಸ್ಕರಿಸುತ್ತಾಳೆ. ಇಲ್ಲಿ ತಾನು ತನ್ನ ಯೌವ್ವನ ಕಾಮುಕತೆ ಬಗ್ಗೆ ವಿಚಾರಪೂರ್ಣವಾದ ಪೂರ್ಣವಾದ ವಿಚಾರಧಾರೆಗಳನ್ನು ಹೊರಹಾಕುತ್ತಾಳೆ. ಇಲ್ಲಿ ಮಹಿಳೆಯ ಸೂಕ್ಷ್ಮ ಒಳನೋಟಗಳನ್ನು ಗುರುತಿಸಲು ಪ್ರಯತ್ನಿಸಬೇಕಾಗಿದೆ.

"ನುಚ್ಚಾಯ್ತು ನೀರು ಹೊಳಯಾಗ" ಎಂಬ ಹಾಡುಗಳಲ್ಲಿ ಸಹ ಗೆಣೆಕಾರ (ಗೆಳೆಯ) ಸತ್ತು ಹೋದಾಗ ಅವನನ್ನು ಕಂಡು ಅವನ ಹೆಂಡತಿಗಿಂತ ಈಕೆಗೆ ಬಹುದುಃಖವಾಗಿ ಕಾಣುತ್ತದೆ. ಆಕೆ ತನ್ನ ಗೆಣೆಕಾರನನ್ನು ನೆನಪಿಸಿಕೊಂಡು ಒಳ-ಒಳಗೆ ದುಃಖ ತಡೆಯಲಾರದೆ ಹೊರಹಾಕುತ್ತಾಳೆ. ಆಗ ಅತ್ತೆಯ ಮನೆಯಲ್ಲಿ ಇರುತ್ತಾಳೆ. ಇದನ್ನು ಯಾರಿಗೂ ಸಂಶಯಬಾರದಂತೆ ಹೇಳಬೇಕಾದಾಗ ಮಣ್ಣಿನ ಕೊಡದ ನೆಪವನ್ನು ಮಾಡಿಕೊಂಡು ತನ್ನ ಹೆಣ್ಣಿನ ಸ್ಥಿತಿಯನ್ನು ಹೇಳುತ್ತಾ ಬರುತ್ತಾಳೆ.

ಬುಡಕಟ್ಟು ಜನಾಂಗಕ್ಕೆ ಸೇರಿದ ಮಹಾಕಾವ್ಯ "ಮಲೆಯ ಮಾದೇಶ್ವರನ ಕಾವ್ಯ" ಪುರುಷನ ಮೂಲ ಅಧೀಪತನವನ್ನು ದಾಟಿ ಹೊರಬರುತ್ತದೆ. ಪಾತಿವ್ರತ್ಯದ ಬಗೆ ಪಾವಿತ್ರ್ಯದ ಏನೊ ಅನೇಕ-ನಿರ್ಬಂಧನೆಗಳನ್ನು ಹಾಕಿದರೂ ಅದನ್ನು ಮುರಿದು ಕಟ್ಟುವ

ಕ್ರಿಯೆ ಹೆಣ್ಣಿನ ತಾಯಿತನವನ್ನು ಹಂಬಲಿಸುವ ಗುಣ ಮಹಿಳಾ ಬದುಕಿನ ಪ್ರತಿಭಟನೆ ಪ್ರಾಮಾಣಿಕವಾಗಿ ದಾಖಲಿಸಲಾಗುತ್ತದೆ. ಇಲ್ಲಿ ಕಾವ್ಯದಲ್ಲಿ ಬರುವ ಪ್ರತಿಯೊಂದು ಹಂತವು ಕಾವ್ಯದಲ್ಲಿ ಬಹು ಮುಖಿ ನೆಲೆಗಳಲ್ಲಿ ಕಾಣುತ್ತೇವೆ. ಸೋಲಿಗನ ನೀಲಯ್ಯ ಪಶುಪಾಲಕನಾಗಿದ್ದನ್ನು ತುಂಬಿ ಸೋಲಿಗನ ಕಾಣುವ ದೊಡ್ಡಿಯಲ್ಲಿ ಕಾಣುವ ಚೆಂದದ ಮಹಿಳೆ ಸಂಕಮ್ಮನನ್ನು ಆಕೆಯ ಚೆಲುವಿಗೆ ಪ್ರೀತಿಯ ಕಂಡು ಸ್ವತಃ ಸೋಲಿಗನ ನೀಲಯ್ಯ ಆಕೆಯನ್ನು ಮೆಚ್ಚಿಕೊಂಡು ವಿಆಹವಾಗಿದ್ದನ್ನು ಇಲ್ಲಿ ಒಂದೇ ಕುಟುಂಬಯಿಲ್ಲದೇ ಕೂಡ ಕುಟುಂಬ ಸೇರಿಕೊಂಡಿರುತ್ತದೆ. ಈ ಕೂಡ ಕುಟುಂಬದಲ್ಲಿ ಅವರವರಲ್ಲಿ ಜಗಳ ಒಳಜಗಳಗಳುಂಟಾದವು ಆ ಮೂಲಕವೇ ನೀಲಯ್ಯ ಹಾಗೂ ಸಂಕಮ್ಮ ಇಬ್ಬರು ಬೇರೆ ಬೇರೆಯಾಗುತ್ತಾರೆ. ಬೇರೆ ಗುಡಿಸಲಲ್ಲಿ ಪ್ರತ್ಯೇಕವಾದ ಜೀವನವನ್ನು ಸಾಧಿಸುತ್ತಾರೆ. ನೀಲಯ್ಯ ಸ್ವತಃ ಬೇಟೆಗಾರನಾಧ್ಧ ರಿಂದ ಬೇಟೆಯಾಡಲು ಕಾಡಿಗೆ ಹೋಗುತ್ತಾನೆ. ಆದರೆ ಆತನಿಗೊಂದು ಆತಂಕವಿತ್ತು ತನ್ನ ಹೆಂಡಿ ಸಂಕಮ್ಮ ಚಂದುಳ್ಳೆ ಚೆಲುವೆಯಾಗಿದ್ದಳು ಒಬ್ಬಳನ್ನೇ ಗುಡಿಸಲಲ್ಲಿ ಬಿಟ್ಟು ಹೋಗಲು ಆತನಿಗೊಂದು ಮನಸ್ಸು ಆಗುತ್ತಿರಲಿಲ್ಲ. ಬೇಟೆಗೆ ಹೋದರೆ ಹೆಂಡತಿಯ ಚಿಂತೆಯಲ್ಲಿಯೇ ಮಗ್ನನಾಗಿ ಬಿಡುತ್ತಿದ್ದ ತನ್ನ ಹೆಂಡತಿ ಶೀಲದ ಬಗ್ಗೆ ಅವನಿಗೆ ಅನುಮಾನ ಉಂಟಾಗುತ್ತದೆ. ಪ್ರತಿಯೊಂದು ಹಂತದಲ್ಲೂ ಸಹಿತ ಆತ ಸಂಕಮ್ಮನನ್ನು ನಿನ್ನ ಶೀಲವನ್ನು ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳಬೇಕು. ಹಾಗೆಯೇ ನಾನು ಕಾಪಾಡುತ್ತೇನೆಂದು ಭರವಸೆ ಕೊಡಬೇಕೆಂದು ಬಲಗೈ ಭಾಷೆಎ ಪಡೆಯಲು ಮುಂದಾಗುತ್ತಾನೆ. ಇದಕ್ಕೆ ತನ್ನ ಹೆಂಡತಿಯ ಮೂಲಕಾರಣವನ್ನು ಕಂಡುಕೊಂಡ ಸಂಕಮ್ಮ ಸಂಪ್ರದಾಯದಂತೆ ಒಪ್ಪಿಕೊಂಡರೂ ಭಾಷೆ ಕೊಡಲು ನಿರಾಕರಿಸುತ್ತಾಳೆ. ನಾನು ಒಪ್ಪಿದರೆ ಮುಂದೆ ಗಂಡ ಬೇಟೆಗೆ ಹೋದವನು ಹಿಂತಿರುಗಿ ಬರದಿದ್ದಾಗ ನಾನೇನು ಮಾಡಲಿ ಎಂಬ ಆತಂಕದಿಂದ ನಿರಾಕರಿಸುತ್ತಾಳೆ. ಇಲ್ಲಿ ವೈಯಕ್ತಿಕ ಭಾಷೆ ಕೊಡಲು ಸಾಧ್ಯವಾಗದೇ ಹೋಗುತ್ತಾಳೆ. ವೈಯಕ್ತಿಕ ಸ್ವಾತಂತ್ರ್ಯದ ಪರಿಕಲ್ಪನೆ ಕಾಣುತ್ತಾಳೆ. ಒಂಟಿಯಾಗಿ ತಾನು ಜೀವನವನ್ನು ಕಳೆಯಲು ಹಿಂಜರಿಯುತ್ತಾಳೆ. ಅವನು ತನ್ನ ಸ್ವಾರ್ಥಕ್ಕಾಗಿ ಭಾಷೆಯನ್ನು ಕೊಡುತ್ತಾನೆಂಬ ಹುಸಿ ನಂಬಿಕೆಗೆ ಈಗೆ ಹೆದರುವುದಿಲ್ಲ, ಅಂಜಲಿಲ್ಲ. ಸ್ವಾರ್ಥದ ಅರಿವು ಉಂಟಾಗುತ್ತದೆ. ಸ್ವಾಭಿಮಾನಕ್ಕೆ ಧಕ್ಕೆಯಾಗದಂತೆ ಆತ್ಮಸಾಕ್ಷಿಗೆ ವಂಚನೆ ಮಾಡಿಕೊಳ್ಳಲು ಜನಪದ ಮಹಿಳೆ ಮುಂದೆ ಬರುತ್ತಾಳೆ ಆಗ ತನ್ನ ಭಾಷೆ ಕೊಡಲು ನಿರಾಕರಿಸಿ ಈ ರೀತಿ ಹೇಳುತ್ತಾಳೆ.

ನೀನು ಕಟ್ಟಿದ ತೆರವ ತಕ್ಕಯ್ಯಾ
ನನ್ನ ಹಟ್ಟಿಂದಾಚೆ ಕಳುವಯ್ಯಾ
ನಿನ್ನ ದಾರಿಯ ನೀನು ನೋಡಯ್ಯಾ

ಎಂದು ಹೇಳುವ ಮೂಲಕ ನಿನ್ನ ದಾರಿ ನೋಡಿಕೊಳ್ಳಬೇಕು ನೀನು ಕಟ್ಟಿದ ತೆರವ ನಾನು ಕಾಪಾಡಿಕೊಳ್ಳುತ್ತೇನೆ ಎಂಬ ಆಶಯ ವ್ಯಕ್ತಪಡಿಸುತ್ತಾಳೆ.

ನನ್ನ ದಾರಿಯ ನಾನು ನೋಡ್ತೀನಿ
ನಾನು ಬಲಗೈ ಮುಟ್ಟಿ ಭಾಷೆ ಕೊಡುವಂತ
ಮಗಳಲ್ಲ ಹೋಗೊ ಯಜಮಾನ

ನಿನ್ನ ದಾರಿ ನೀನು ಹಿಡಿದ ಮೇಲೆ ನನ್ನ ದಾರಿ ನಾನು ಹಿಡಿಯುತ್ತೇನೆ. ಹಾಗೆ ನಾನು ಸುಳ್ಳು ಭರವಸೆ ಪೊಳ್ಳು ಆಶ್ವಾಸನೆ ಕೊಡುವುದಿಲ್ಲವೆಂದು ಹೇಳುತ್ತಾಳೆ. ಬಲಗೈ ಮುಟ್ಟಿ ಭಾಷೆ ಕೊಡುವ ಮಗಳಲ್ಲಿ ಯಜಮಾನನೆಂದು ಹೇಳುವ ಮೂಲಕ ಗಂಡನ ಭಾಷೆಗೆ ನಿರಾಕರಿಸಿ ಪ್ರತಿಭಟಿಸುವ ಗುಣವನ್ನು ಇಲ್ಲಿ ಕಾಣುತ್ತೇವೆ. ಇಲ್ಲಿ ಸಂಕಮ್ಮಳಿಗೆ ವಿವಿಧ ಬಗೆಯ ಅಪಮಾನ ಕಟ್ಟುಪಾಡುಗಳನ್ನು ಹಾಕಿದ್ದರು. ಅವನ್ನೆಲ್ಲ ದೂರಿಕರಿಸಿ ನಿಲ್ಲುತ್ತಾಳೆ. ಮಾತೃ ಪ್ರಧಾನ ಸಂಸ್ಕೃತಿ ವ್ಯವಸ್ಥೆಯನ್ನು ಪ್ರತಿನಿಧಿಸುತ್ತ ಸ್ತ್ರೀಶಕ್ತಿಯನ್ನು ತನ್ನ ಮೂಲ ಧ್ಯೇಯವನ್ನಾಗಿಸಿಕೊಂಡು ಬರುತ್ತಾಳೆ.

ಸಂಕಮ್ಮ ತನ್ನ ಶಕ್ತಿ ಮೀರಿ ನೆಲೆನಿಂತು ತನ್ನ ಅಂತಃ ಸತ್ವದ ಬಗೆಯನ್ನು ಹೊರಹಾಕುತ್ತಾಳೆ. ಅವನ್ನೆಲ್ಲಾ ದಾಟಿ ಹೊರಬಂದಾಗ ಮಾತೃ ಪ್ರಧಾನ ವ್ಯವಸ್ಥೆ ದಾರಿ ಮಾಡಿಕೊಡಲು ಹಾತೊರೆದಿದ್ದಾಳೆ. ನೀಲಯ್ಯ ಸಂಪೂರ್ಣವಾಗಿ ಆಕೆಯ ಹತ್ತಿರ ನಿಲ್ಲದೇ ಬಂದಾಗ ಸಂಕಮ್ಮ ಮಾದೇಶ್ವರನ ಗುಡಿಸಲಿಗೆ ಬಂದಾಗ ಅಲ್ಲಿ ನಿಂತ ಮಾದೇಶ್ವರನನ್ನು ನೋಡಿ ಸಂಕಮ್ಮ ತಾನು ಸ್ವಯಂಪ್ರೇರಣೆಯಿಂದ ಅವನಲ್ಲಿಯೇ ತಾಯಿತನದ ಸಂತಾನವನ್ನು ವ್ಯಕ್ತಪಡಿಸುತ್ತಾಳೆ. ಇಲ್ಲಿಯೇ ಮಹಿಳಾ ಪ್ರತಿಭಟನೆಯ ಮೂಲಕ ಸಾಮಾಜಿಕ ಕಟ್ಟುಪಾಡುಗಳನ್ನು ಹೊರಹಾಕಿ ಅಂತಹ ಚೌಕಟ್ಟನ್ನು ಮೀರಿ ಹೊಸದಾರಿ ಕಂಡುಕೊಳ್ಳಲು ಹೊಸ ಜೀವನ ಪರವಾದ ಹಂಬಲವನ್ನು ಜೀವಪರ ಸಂಸ್ಕೃತಿಯನ್ನು ಪ್ರತಿಪಾದಿಸುವ ಹಂಬಲದ ಮೂಲಕ ಸಂಕಮ್ಮ ತನ್ನ ನೂರಾರು ಕನಸು ಬಯಕೆಗಳನ್ನು ತಾನು ಪ್ರತಿಭಟನೆಯ ಮೂಲಕ ವ್ಯಕ್ತಪಡಿಸುವುದನ್ನು ಹಾಡುಗಳಲ್ಲಿ ಕಾಣುತ್ತೇವೆ.

**ಜನಪದ ಕಾವ್ಯದಲ್ಲಿ ಸ್ತ್ರೀ ಪಾತ್ರಗಳು:**

ಜನಪದ ಕಾವ್ಯಗಳು ಎಂದಾಗ ನಮ್ಮಲ್ಲಿ ವ್ಯಕ್ತವಾಗುವ ಕಾವ್ಯ ಗೀತೆ ಖಂಡ ಕಾವ್ಯ ಕಥನ ಗೀತೆ ಮಹಾ ಕಾವ್ಯಗಳು ಹೇರಳವಾಗಿ ನಮ್ಮಲ್ಲಿ ದೊರಕುತ್ತವೆ. ಇವೇ ಶಾಶ್ವತವಾದ

ಚಿಂತನೆಗಳನ್ನು ಒಳಗೊಂಡಿವೆ ಇವುಗಳೆಲ್ಲವು ಮೌಖಿಕ ಪರಂಪರೆಯನ್ನು ಹೊಂದಿವೆ. ಮೌಖಿಕ ಪರಂಪರೆ ಉಳಿದುಕೊಂಡು ಬೆಳೆದುಕೊಂಡು ಕಾವ್ಯಗಳಾಗಿವೆ. ಇವು ಮಹಿಳೆಯರಿಂದಲೇ ರಚಿತವಾಗಿರುವವುಗಳಾಗಿವೆ. ಇವುಗಳ ಸಮಗ್ರ ಜೀವನ ಸಾಧನೆಗಳು ಆಯಾ ಮಹಿಳಾ ಕಾವ್ಯದಲ್ಲಿಯೇ ವ್ಯಕ್ತವಾಗಿವೆ. ಭಾರತೀಯ ಸಂಸ್ಕೃತಿಯ ಮಹಾಕಾವ್ಯದ ಪರಂಪರೆಯನ್ನು ಅರ್ಥೈಸಿಕೊಳ್ಳತೊಡಗಿದ ಸಂಗತಿಗಳು ಸಹಿತ ಮೂಲ ಹುಟುಕಾಟ ನಡೆಸುವುದು ರಾಮಾಯಣ ಮತ್ತು ಮಹಾಭಾರತ ಕಾವ್ಯಗಳಿಂದಲೇ ಎಂಬುವುದಂತು ಸತ್ಯಾವಾದದ್ದಾಗಿದೆ. ಈ ಎರಡು ಮಹಾ ಕಾವ್ಯಗಳು ಮಹಿಳಾ ಕೇಂದ್ರೀತವಾದ ಕಾವ್ಯಗಳು ಇಲ್ಲಿ ಪುರುಷ ಪ್ರಧಾನವಾದ ಅಂಶಗಳನ್ನು ಪ್ರತಿಪಾದಿಸಿ ಅಲ್ಲಿನ ವೀರ ತತ್ವದ ಗುಣ ಸಾಬೀತುಗೊಳಿಸುತ್ತದೆ. ಅಲ್ಲಿಯ ಶ್ರೇಷ್ಠತೆಯ ಗುಣ ಇಲ್ಲಿ ಕಾಣುತ್ತೇವೆ. ಇಲ್ಲಿ ಯಾವುದೇ ಮಹತ್ವದ ಅಂಶಗಳೂ ಪ್ರತಿಪಾದನೆ ಆಗಬೇಕಾದರೂ ಸಹಿತ ಅವುಗಳೆಲ್ಲವು ಮಹಿಳಾ ಕೇಂದ್ರೀತ ನೆಲೆಗಳಲ್ಲಿ ಅಧ್ಯಯನ ಮಾಡುವಂತವುಗಳಾಗಿವೆ. ಸೀತೆ, ದ್ರೌಪದಿ, ಸುಭದ್ರೆ, ಅಹಲ್ಯೆ, ಶಬರಿ ಮುಂತಾದವರುಗಳೆಲ್ಲರೂ ತಮ್ಮೊಳಗಡೆ ಹಬ್ಬಿಕೊಂಡ ಅಂತಹ ಶಕ್ತಿಯನ್ನು ಹೊಂದಿಕೊಂಡು ತಮ್ಮೊಳಗಡೆಯೇ ಇರುವಾತ ಚಿಂತನೆಗಳ ಮೂಲಕ ಪ್ರತಿಪಾದನೆ ಮಾತನ್ನಾಗಿದೆ. ಪುರುಷ ಪ್ರಧಾನವಾದ ಸಂಸ್ಕೃತಿ ಮತ್ತು ಅವುಗಳ ಚಿಂತನೆಗಳು ಸಮಾಜ ಒಡ್ಡುವ ರೀತಿ ನೀತಿಗಳಲ್ಲಿ ಸಹಿತ ಎದ್ದು ಕಾಣುವ ಅಂಶಗಳನ್ನು ಪ್ರತಿಪಾದಿಸುತ್ತವೆ. ಪುರುಷನ ಸವಾಲುಗಳನ್ನು ಸ್ವೀಕರಿಸಿಕೊಂಡು ಮಹಿಳಾ ಜನಪದ ಕಾವ್ಯದಲ್ಲಿ ಪ್ರತಿಭಟನೆ ವ್ಯಕ್ತಮಾಡಿದ್ದು, ಮನನೀಯವಾಗಿದೆ. ನಮ್ಮಲ್ಲಿ ಎರಡು ಸಂಸ್ಕೃತಿಗಳು ಬಹು ವಿಶಾಲವಾಗಿ ಹರಡಿಕೊಂಡು ಬಂದಿವೆ. ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳು ದಟ್ಟವಾಗಿ ಬೆಳೆದುಕೊಂಡು ಬಂದಿವೆ. ಇಲ್ಲಿ ಮೂಲ ಸಂಸ್ಕೃತಿ ದ್ರಾವಿಡ ಸಂಸ್ಕೃತಿ ನ್ಮ ನೆಲದ ವಿಧಾನವನ್ನು ಹೇಳಿಕೊಡುತ್ತದೆ. ಆರ್ಯರು ಹೊರಗಿನಿಂದ ಬಂದ ಸಂಪೂರ್ಣವಾದ ವಿವರಗಳನ್ನು ದಾಖಲಿಸುವುದಾಗಿದ.ಎ ಇಲ್ಲಿ ಆರ್ಯ ದ್ರಾವಿಡ ಸಂಸ್ಕೃತಿ ಒಂದೇ ನಾಣ್ಯದ ಎರಡು ಮುಖಗಳಾಗಿ ನಮಗೆ ಕಂಡು ಬಂದಿವೆ. ಆರ್ಯ ಮತ್ತು ದ್ರಾವಿಡ ಸಂಸ್ಕೃತಿ ಒಂದೇ ಎನ್ನುವ ಮಾತು ಗಾಢವಾದ ಸಂಬಂಧವನ್ನು ಹೊಂದಿದ್ದರೂ ಸಹಿತ ಮಹಿಳಾ ಪ್ರಪಂಚದಲ್ಲಿ ಅದು ತನ್ನ ಹೊಸತನದ ಅಂಶಗಳನ್ನು ಪರಿಣಾಮಕಾರಿಯಾಗಿ ಪ್ರಭಾವ ಬೀರಿವೆ. ಇಲ್ಲಿಯ ಮೂಲ ಗುಣವನ್ನು ಸಹಿತ ಕಂಡಾಗ ಮಹಿಳಾ ವಿಚಾರದಲ್ಲಿ ಮಾತ್ರ ಭಿನ್ನವಾದ ಆಲೋಚನೆ ಚಿಂತನೆಗಳು ನಮ್ಮಲ್ಲಿ ದೊರಕುತ್ತವೆ. ಇವು ಮಹಿಳಾ ಪ್ರಗತಿ ಪರವಾದ ಆಲೋಚನೆ ಹೊಸ ಬಗೆಯಲ್ಲಿ ಕೆಲಸ ನಿರ್ವಹಿಸುತ್ತವೆ. ಆರ್ಯಕ್ಕಿಂತ ದ್ರಾವಿಡ ಸಂಸ್ಕೃತಿಯು ಮಹಿಳೆ ಹೆಚ್ಚಿನ ಅಂಶಗಳು ಪ್ರತಿಪಾದನೆ ಮಾಡುತ್ತವೆ. ದುಡಿಯುವ ವರ್ಗ ಹಾಗೂ ಶ್ರಮ ಸಂಸ್ಕೃತಿಯಲ್ಲಿ ಎದ್ದು ಕಾಣುವ ಅಂಶಗಳು ನೇರವಾಗಿ ಪ್ರಭಾವ ಬೀರದ್ದು ಕಂಡು ಬರುತ್ತವೆ. ಈ ಕಾರಣದಿಂದಾಗಿಯೇ ಜನಪದರಲ್ಲಿ ಕಾಣುವ

ಮಹಿಳೆ ವಯದಿಕ ಸಂಸ್ಕೃತಿಯ ಪ್ರಭಾವಕ್ಕೊಳಗಾದದ್ದು ಸಹ ನಾವು ನೋಡಬೇಕಾಗಿದೆ ಇಂತಹ ಜನಸಾಮಾನ್ಯರು ಮೌಖಿಕವಾಗಿ ರಚವಿಸಿದ ಕಾವ್ಯಗಳು ಮಹಿಳಾ ಗುಣಾತ್ಮಕ ಅಂಶಗಳನ್ನು ಪ್ರತಿಪಾದನೆ ಮಾಡುತ್ತವೆ ಎಂಬುವುದನ್ನು ಅಲ್ಲಗಳೆಯುವಂತಿಲ್ಲ.

ಸೀತೆ ರಾಮಾಯಣ ಮೂಲಕಾವ್ಯಕ್ಕೆ ಕೇಂದ್ರ ವ್ಯಕ್ತಿ ಅದರಲ್ಲೂ ಸ್ತ್ರೀಪಾತ್ರದಲ್ಲಿ ಗಹನವಾಗಿ ಆಲೋಚನೆ ಹೋರಾಡುವಿಕೆ ಮಿಂಚಾಗಿ ಬಂದ ಹಲವು ಮುಖ್ಯವಿಚಾರಗಳಲ್ಲಿ ರಾಮಾಯಣ. ಮಹಾಕಾವ್ಯ ಅಧೀಕೃತವಾದ ದಾಖಲೆಯನ್ನು ಒದಗಿಸುತ್ತದೆ. ಶೂರ್ಪಣಕಿ ರಾಮ. ರಾವಣನಿಂದ ಅನೇಕ ಕಷ್ಟಗಳನ್ನು ಅನುಭವಿಸಿ ಹೆಣ್ಣಾಗಿ ಹುಟ್ಟಿದ ತಪ್ಪಿಗೆ ಪರಿತಪಿಸಬೇಕಾದ ನೋವುಗಳನ್ನು ಉಣಲಾಯಿತು. ಸೀತೆ ಎಷ್ಟೇ ಮೇಲಸ್ತರದಲ್ಲಿ ನೆಲೆ ನಿಂತರೂ ಹಲವು ಬಗೆಯಲ್ಲೂ ಹೊರಬಂದ ಹೊಸತನದಿಂದ ಕಾಣಲು ಸಾಧ್ಯವಾಗಿದೆ. ಸೀತೆ ರಾಮನಂತಹವನೂ ಕೂಡಾ ಕೊಡುವ ಪರೀಕ್ಷೆಯಲ್ಲಿ ಆಕೆ ಮರುಮಾತಿಲ್ಲದೆ ಅವನ್ನೆಲ್ಲ ಜಯಸಿದ್ದಲ್ಲದೆ ತನ್ನ ಪಾತಿವ್ರತೆ ಹಾಗೂ ಶೀಲದ ಸಾತ್ವೀಕ ಗುಣಗಳನ್ನು ಪ್ರತಿಪಾಲಿಸುವ ಅಂಶಗಳನ್ನು ಸದಾ ಕಣ್ಣೆದುರಿಗೆ ನಿಲ್ಲುತ್ತದೆ. ಕೊನೆಗಳಗೆಯಲ್ಲೂ ಭೂಮಿಯ ತಾಯಿ ಒಡಲು ಪ್ರವೇಶಿಸುವ ಮೂಲಕ ಮಾನದಿಂದ ಸ್ವೀಕರಿಸಿಕೊಂಡು ಪುರು ಪ್ರಧಾನ ವ್ಯವಸ್ಥೆಯಲ್ಲೂ ಮಹಿಳೆ ಇಂದಿಗೂ ಎತ್ತರದ ಧ್ವನಿ ಮಾತನಾಡಲು ಅವಕಾಶ ಇಲ್ಲದ ಹೊತ್ತಿನಲ್ಲಿ ಸಹಿತವಾಗಿ ಮೌನದಿಂದ ಸ್ವೀಕರಿಸಿಕೊಂಡು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆ ಇಂದಿಗೂ ಎತ್ತರದ ಧ್ವನಿ ಮಾತನಾಡಲು ಅವಕಾಶವಿಲ್ಲದ ಹೊತ್ತಿನಲ್ಲಿ ಸಹಿತ ಮೌನವಾದ ಪ್ರತಿಭಟನೆಯನ್ನು ಹೊರಹಾಕಿ ತನ್ನ ನಿಜಸ್ವರೂಪವನ್ನು ತೋರಿಸಿದ್ದು. ಮಹತ್ವದ ಸಂಗತಿಯಾಗಿದೆ.

ಶೂರ್ಪನಿಕೆಯ ಚಿತ್ರಣವನ್ನು ರಾಮಾಯಣಗಳು ಬಹುಮುಖಿ ನೆಲೆಗಳಲ್ಲಿ ವ್ಯಕ್ತವಾಗಿದ್ದು ಕಾಣುತ್ತವೆ. ಜನಪದ ರಾಮಾಯಣದಲ್ಲಿ ಶೂರ್ಪನಿಕಿಯೇ ತನಗೆ ಅವಮಾನವಾದ ಅಣ್ಣ ರಾವಣನ ಮೇಲೆ ಸೇಡು ತೀರಿಸಿಕೊಳ್ಳುವ ಸ್ತ್ರೀ ಶಕ್ತಿಯಾಗಿ ಕಂಡು ಬಂದಿದ್ದಾಳೆ. ಹಾಗೆಯೇ ಶಿಷ್ಟ ರಾಮಾಯಣದಲ್ಲಿ ಶೂರ್ಪನಿಕಿ ಕಾಮುಕ ಮಹಿಳೆಯಾಗಿ ರಾಮ-ಲಕ್ಷ್ಮಣರನ್ನು ಮೋಹಿಸಲು ಬರುವ ಪಾತ್ರವಾಗಿದೆ. ಇವೆಲ್ಲಕ್ಕಿಂತ ಹೆಚ್ಚಾಗಿ ಶೂರ್ಪನಿಕಿ ರಾವಣ ಅಣ್ಣನಷ್ಟು ಶಕ್ತಿ ಪ್ರದರ್ಶಿಸಲು ಕೆಟ್ಟದಾರಿ ಹಿಡಿಯುವ ಸದಾ ಹಾತೊರೆಯುವ ಗುಣಗಳಲ್ಲಿ ಸಹಿತ ಇಲ್ಲಿ ದಾಖಲಾಗಿವೆ. ಅವುಗಳು ನಮಗೆ ಹೆಚ್ಚು ಪ್ರಸ್ತುತವಾಗುತ್ತವೆ. ಜನಪದ ರಾಮಾಯಣದಲ್ಲಿ ಶೂರ್ಪಣಕಿ ಮಹಿಳೆ ಅವಳ ಗಂಡ ಹಲ್ಲೂರ ಪಾತಾಳ ಲೋಕದ ದೊರೆ. ರಾವಣ ಯಾವಾಗಲೂ ಮಹತ್ವಾಕಾಂಕ್ಷಿ ಹೊಂದಿದ್ದ ದೇವಲೋಕ. ಭೂಲೋಕಗಳನ್ನು ಗೆದ್ದು ಪರಾಕ್ರಮಿಯಾದ ಪಾತಾಳ ಲೋಕಗೆಲ್ಲಲೂ ಸಹ

ಮುಂದಾದಾಗ ಇದರಿಂದ ಹತಾಶಗೊಂಡ ರಾವಣ ಹಲ್ಲೂರ ಪಾತಾಳ ಲೋಕದ ದೊರೆ ನಿರಾಕರಿಸುತ್ತಾನೆ. ರಾವಣ ಆತನನ್ನು ಕೊಲ್ಲಿಸಿದನು. ಅವನ ದುಷ್ಟತನವನ್ನು ಕಂಡುಕೊಂಡ ಶೂರ್ಪನಿಕಿ ಸೇಡು ತೀರಿಸಿಕೊಳ್ಳಲು ಸದಾ ಹಾತೋರೆಯುತ್ತಾಳೆ. ಇದನ್ನು ಪ್ರಚೋದಿಸಲು ಹೇಳುತ್ತಾಳೆ.

ನಿನ್ನಂತ ಶೂರರಿಲ್ಲ
ನಿನ್ನ ಮುಂದ ನಿಂತೋರಿಲ್ಲ
ಹತ್ತುತಲೆ ರಾವಣ
ಅವನೊಪ್ಪುವ ಮಾಡಬೇಕು

ಎಂದು ಹೇಳುವ ಮೂಲಕ ಮಗನಿಗೆ ಸ್ವತಃ ಶೂರ್ಪನಿಖಿ ನೀಡಿದ ಪ್ರಚೋದನೆ ಅವನಲ್ಲಿ ಸೇಡಿನ ಮನೋಭಾವ ವಿಷಬೀಜ ಬಿತ್ತುವ ತಾಯಿಗೆ ಧೈರ್ಯತನದ ಮಾತುಗಳನ್ನು ಪ್ರತಿನಿಧಿಸುವ ಹಾಗೆ ಮಗನನ್ನು ತಯಾರಿಸುತ್ತಾಳೆ. ಒಂದು ಪ್ರಸಂಗದಲ್ಲಿ ಶೂರ್ಪನಿಖಿಯ ಮನ "ಸಣ್ಣುಮಾರ" ಲಕ್ಷ್ಮಣನಿಂದ ಕೊಲ್ಲಲ್ಪಡುತ್ತಾನೆ. ಇದರಿಂದ ಲಕ್ಷ್ಮಣನನ್ನು ಮೀರಿಸಬೇಕು ಆತನನ್ನು ಕೊಲ್ಲುವ ಸಂಚನ್ನು ಹೂಡುತ್ತಾಳೆ. ಲಕ್ಷ್ಮಣನನ್ನು ಸಂಪೂರ್ಣವಾಗಿ ಹಿಂದೆ ಬಿದ್ದಾಗ ಆಗ ಶೂರ್ಪನಿಖಿ ಮೊಲೆ, ಮೂಗು ಕತ್ತರಿಸಿಕೊಟ್ಟ ಇದರಿಂದ ಅವಳು ಲೈಂಗಿಕ ಕಾಮುಕತೆಯಿಂದ ನಿಷ್ಕ್ರಿಯೆ ಪಡುವಂತೆ ಮಾಡಿದರು. ಒಟ್ಟಾರೆ ವೈರಿಗಳನ್ನು ನಾಶ ಮಾಡಬೇಕೆಂಬ ಹುನ್ನಾರವನ್ನು ಶೂರ್ಪನಿಖಿ ಮಾಡುತ್ತಾಳೆ. ರಾಮ-ಲಕ್ಷ್ಮಣರರು ಕೂಡಿಕೊಂಡು ಇರುವ ಅತ್ಯಂತ ಗಟ್ಟಿಗರಾಗಿದ್ದರು. ಅವರ ಸಾಮರ್ಥ್ಯವನ್ನು ಬಿಟ್ಟುಕೊಡಬೇಕು. ಅವರಿಂದ ವಿನಾಶವನ್ನು ಕಾಣಬೇಕಾದರೆ ಏನು ಮಾಡಬೇಕೆಂಬ ಪ್ರಯತ್ನಪಟ್ಟುಕೊಂಡು ಆಕೆ ಇವರೀರ್ವರಲ್ಲಿ ಸಂಚು ಹೂಡಿ ಅವರನ್ನು ಸಂಪೂರ್ಣವಾಗಿ ಮುಗಿಸಬೇಕೆಂದು ಪಡತೊಡುತ್ತಾಳೆ.

ತನಗಾದ ಮತ್ತು ತನ್ನ ಮಹಿಳಾ ಕುಲಕ್ಕೆ ಆದ ಅನ್ಯಾಯವನ್ನು ಪ್ರತಿಭಟಿಸಿ ತನ್ನ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ ಹಂತ ಸ್ತ್ರೀ ಶಕ್ತಿ ನಡೆಸುವ ಚಿಂತನೆಯನ್ನು ಇಲ್ಲಿ ಶೂರ್ಪನಿಖಿ ಎದ್ದುಕಾಣುತ್ತಾಳೆ.

ಮಹಾಭಾರತ ನಮ್ಮ ಪ್ರಾಚೀನಕಾವ್ಯಗಳಲ್ಲಿ ಒಂದು ಇದನ್ನು ಕುರಿತು ಬಹುಹಿಂದಿನಿಮದಲೂ ತನ್ನ ಪಾತ್ರ ವಿಶಿಷ್ಟವಾಗಿದೆ. ದ್ರೌಪದಿ ಎಂಬ ಪಾತ್ರವೇ ನಮಗೆಲ್ಲ ಪ್ರಿಯವಾಗುತ್ತದೆ. ಶಿಷ್ಟಕಾವ್ಯಗಿಂತ ಜನಪದ ಮಹಾಭಾರತ ಚಿತ್ರಣ, ವಸ್ತು ಭಿನ್ನತೆಯಿಂದ

ಕೂಡಿದೆ. ರಾಮಾಯಣ ಸೀತೆಯ ಪಾತ್ರಕ್ಕಿಂತ ಅವಳ ಪಾತ್ರದ ಜೀವನ ದ್ರವ್ಯಕ್ಕಿಂತ ಮೂಲ ನೆಲೆಗಳಲ್ಲಿ ಈ ಪಾತ್ರ ನಿಲ್ಲುತ್ತದೆ. ತಣ್ಣನೆಯ ಪಾತ್ರವಾಗಿ ಸೀತೆ ನಿಂತರೆ ದ್ರೌಪದಿ ಬೆಂಕಿಯ ಮಗಳಾಗಿ ಹೊರಬಂದಿದ್ದಾಳೆ. ಜನಪದರು ಸಂಪೂರ್ಣವಾಗಿ ಈಕೆಯನ್ನು ತನ್ನ ತರಾಟೆಗೆ ತೆಗೆದುಕೊಳ್ಳುತ್ತಾರೆ. ದ್ರೌಪದಿಯು ಹುಟ್ಟು ಗುಣ ಸಹಿತ ಬೆಂಕಿಯೇ ಆಗಿದೆ. ಬೆಂಕಿಯಲ್ಲಿ ಅರಳದ ಹೂವಾಗಿ ದ್ರೌಪದಿಯನ್ನು ಜನಪದರು ಕಂಡಿದ್ದಾರೆ.

ಬೆಂಕೀಯ ಉಟ್ಯಾಳ ಬೆಂಕೀಯ ತೊಟ್ಯಾಳ
ನಿಂತ ಧರೇಯ ನೆರಳಾಗಿ ಹೊಗೆ ಮೀರಿ ಓಕುಳಿನಾಡಿ
ಕೆಂಚಾರೇ ಮಡದಿ ಕರ್ಣಯ್ಯ

ಎಂದು ಹೇಳುವ ಮೂಲಕ ಗಂಡಿನ–ಪುರುಷನ ಪ್ರತಿಸ್ಪರ್ದೆ ಎಂಬುವುದನ್ನು ಜನಪದ ಕಾವ್ಯಗಳು ದ್ರೌಪದಿಯನ್ನು ಎತ್ತಿಹಿಡಿಯುತ್ತವೆ. ತನಗೆ ಆದ ಮತ್ತು ತನಗೆ ಬರುವ ಎಲ್ಲಾ ವಿಪತ್ತು ಸಮಸ್ಯೆ ಸವಾಲುಗಳನ್ನು ತಾನೆ ಸ್ವತಃ ಕೈಯೆತ್ತಿ ನಿಂತುಕೊಂಡು ಎದುರಿಸುತ್ತಾಳೆ. ನಿವಾರಿಸಿಕೊಳ್ಳಲು ಅನೇಕ ಉಪಯೋಗವಾದ ರೀತಿಯಲ್ಲಿ ನೋಡಿದ್ದಾಳೆ. ಮುತ್ಸದ್ದಿಯಾಗಿದ್ದು. ಗಂಭೀರ ಚಿಂತನೆ ಆಲೋಚನೆಯ ಮೂಲಕ ಮಹಾಭಾರತ ನಡೆಯಲು ಕೇಂದ್ರ ವ್ಯಕ್ತಿಯಲ್ಲಿ ದ್ರೌಪದಿಯು ಆಗಿದ್ದಾಳೆ. ದುಯೋಧನನೊಡನೆ ನೆತ್ತವಾಡಲು ಇವುಗಳಿಗೆ ಯಾವುದೇ ಹಿಂಜರಿಕೆಯಲ್ಲೂ ಗಂಡಸಿನ ಜೊತೆ ಸ್ಪರ್ಧಿಗಿಳಿಯುವ ಮನೋಧರ್ಮ ಅತ್ಯಂತ ಅಮೂಲ್ಯವಾಗಿ ಚಿತ್ರಿತವಾಗಿದೆ.

ಕೌರವರ ಸಂಸಾರ ಕತೆ ಮಹಾಭಾರತವಾಗಿದೆ. ಇದರಲ್ಲಿ ಸಂಪೂರ್ಣವಾಗಿ ದುರ್ಯೋರ್ಧನನೊಂದಿಗೆ ಪಾಂಡವರು ಜೂನಿನಲ್ಲಿ ಎಲ್ಲವನ್ನು ಕಳೆದುಕೊಂಡರು ಧರ್ಮರಾಯ ತನ್ನ ನೀತಿ ನ್ಯಾಯ ಧರ್ಮಕ್ಕಾಗಿ ಹಾತೊರೆಯುವ ಸಂಗತಿಗಳು ಇಲ್ಲಿ ಮೂಕ ವಿಸ್ಮಿತವಾದವು. ಸರ್ವಸ್ವವನ್ನು ಕಳೆದುಕೊಂಡು ಸೋತು ನಿಂತಾಗ ಕೊನೆಗೆ ದುರ್ಯೋರ್ಧನ ದ್ರೌಪದಿಯನ್ನು ಪಣಕ್ಕಿಡಲಾಯಿತು. ಆಗ ಧರ್ಮರಾಯ ಒಪ್ಪಿದ ಆಗ ಎಲ್ಲವೂ ಕಳೆದುಕೊಂಡು ಪರಿತಪಿಸಿ ಮನೆಗೆ ಹಿಂದಿರುಗುವಾಗ ತನ್ನ ತಾಯಿಯ ಕುಂತಿ ಮುಂದೆ ದ್ರೌಪದಿಯ ಪಣಕ್ಕಿಟ್ಟಿದು ಹೇಳಿದರು. ಇದರಿಂದ ಕುಂತಿಯು ನೋವು ಹೊರಹಾಕಲಾಯಿತು. ಕುಂತಿ ಸಂಪೂರ್ಣವಾಗಿ ನೋವು ದುಃಖ ಎಲ್ಲವೂ ಬಂದು ತಡೆಯಲಾರದೆ ದುಃಖಿಸುತ್ತಾಳೆ. ಆ ನಿನ್ನ ಮಡದಿಯನ್ನು ಪಣಕ್ಕಿಡುವುದಕ್ಕಿಂತ ನನ್ನನ್ನು ನೀವು ಪಣಕ್ಕಿಡಬೇಕೆಂಬ ಮಹಿಳಾ ಪ್ರತಿಭಟನೆ ಇಲ್ಲಿ ಕುಂತಿ ವ್ಯಕ್ತಪಡಿಸುತ್ತಾಳೆ. ಅಲ್ಲದೇ ಪ್ರತಿಯೊಂದು ಹಂತದಲ್ಲೂ ಸಹ ತನ್ನ ತನದ ಗುಣವನ್ನು ಸಾಬೀತುಪಡಿಸಿಕೊಳ್ಳಲು ಸದಾ

ಜಾಗೃತರಾಗುತ್ತಾರೆ. ಆಗ ಪಾಂಡವರು ತನ್ನ ತಾಯಿಗೆ ಹೇಳುವಲ್ಲಿ 'ಮುದಿಯಾದ ನಿನ್ನ ಕೇಳುವರ್ಯಾರು" ಎಂದು ಹೇಳಿದಾಗ ಅಲ್ಲಿಯ ಪರಿಸ್ಥಿತಿ ಕೌರವರ ನೀತಿಗಳು ಸ್ಪಷ್ಟವಾಗಿ ದ್ರೌಪದಿಗೆ ವ್ಯಕ್ತವಾಗುತ್ತವೆ.

ನನ್ನನ್ನು ಕೇಳದೆ ನನ್ನ ಪಣಕ್ಕಿಡುವುದು ಯಾವ ನ್ಯಾಯ ಯಾರಿಗೋ ಏನೋ ಮಾಡಲು ಹೋಗಿ ಪ್ರತಿನಿತ್ಯ ಸಾಯುವ ಹಂತ ತಲುಪಿಸಿದ್ದು, ಇಲ್ಲಿ ಗಮನಿಸಬೇಕಾಗಿದೆ. ಅಲ್ಲದೇ ಪ್ರತಿಯೊಂದು ಹಂತದಲ್ಲೂ ಸಹ ಗಮನಿಸಬೇಕು. ಈ ಐವರು ಗಂಡಂದಿರ ಬಗ್ಗೆ ರೋಷ ಉಕ್ಕುವುದು. ಗಂಡಂದಿರ ವಿಶ್ವಾಸ ಸಂಪೂರ್ಣವಾಗಿ ನಾಶ ಹೊಂದುತ್ತದೆ. ಇವರ ಶೂರತೆ ಅಲ್ಲಗಳೆಯುವ ಮಾತು ಆಡುತ್ತಾಳೆ. ದ್ರೌಪದಿ ಕರೆಯಲು ಕೌರವರು ಕರ್ಣನನ್ನು ಕಳಿಸಿದರೆ ಕರ್ಣನ ರಥವನ್ನು ಏರಲು ಆಕೆ ನಿರಾಕರಿಸಿ ನಡೆದುಕೊಂಡು ಬರುವ ಸ್ಥಿತಿ ಇಲ್ಲಿ ರೋಮಾಂಚನ ಹಾಗೂ ಪ್ರತಿಭಟನೆ ಅಸ್ತ್ರವಾಗಿ ನಿಲ್ಲುತ್ತದೆ.

ಕೌರವರು ದ್ರೌಪದಿಯನ್ನು ಅವಮಾನಿಸುವುದಕ್ಕೆ ಒಂದೇ ಎರಡೇ ನೂರಾರು ಬಗೆಯಲ್ಲಿ ಆಕೆಯನ್ನು ಅವಮಾನಿಸುತ್ತಾರೆ. ದುರ್ಯೋಧನ ದ್ರೌಪದಿಯನ್ನು ತನ್ನ ಮಂಚಕ್ಕೆ ಬಾ ಎಂದು ಕರೆಯುತ್ತಾನೆ. ಇವನ್ನೆಲ್ಲಾ ಕಂಡುಕೊಂಡರೆ ಕೌರವರು ಸಂಪೂರ್ಣವಾಗಿ ದ್ರೌಪದಿಗೆ ಕೊಡಬಾರದ ಹಿಂಸೆ ಪ್ರತಿಹಿಂಸೆಗಳನ್ನು ವ್ಯಕ್ತಪಡಿಸುತ್ತಾರೆ. ಅವನ್ನೆಲ್ಲಾ ಸಹಿಸಿಕೊಂಡು ದ್ರೌಪದಿ ಒಳ ಒಳಗೆ ಮೌನ ಪ್ರತಿಭಟನೆಯ ಕತ್ತಿ ಹಾರಿಸುತ್ತಾಳೆ. ಜೊತೆಗೆ ತನ್ನ ತನು ಕಳೆದುಕೊಳ್ಳಲು ಸಿದ್ಧಳಲ್ಲ ಹಾಗಾಗಿಯೇ ಯಾರು ಆಕೆಯ ರಕ್ಷಣೆಗೆ ಮುಂದೆ ಬರಲಿಲ್ಲ. ರಕ್ಷಣೆ ಮಾಡಿಕೊಳ್ಳಲು ಸದಾ ಹಾತೊರೆದು ದುರ್ಯೋಧನನಿಗೆ ಸವಾಲೊಡ್ಡುತ್ತಾಳೆ. ನನ್ನೊಡನೆ ಜೂಜಾಡಿ ಗೆಲ್ಲಬೇಕೆಂದು ಆಹ್ವಾನ ನೀಡುತ್ತಾಳೆ. ದುರ್ಯೋಧನ ನಿನ್ನ ಗಂಡಂದಿರು ಐವರು ಸೋತು ಸುಣ್ಣವಾಗಿದ್ದಾರೆ ನೀನೇನು ಮಹಾ ಎಂದು ಹೇಳುತ್ತಾನೆ. ಕೌರವರು ತತನ್ನ ಇಚ್ಛೆ ಸರಿಪಡಿಸಿದರೆ ಮಾತ್ರ ಅವರೊಂದಿಗೆ ಸೇರುವುದಾಗಿ ದ್ರೌಪದಿ ನೆಲೆಕಂಡುಕೊಳ್ಳುತ್ತಾಳೆ. ಈ ಪಣ ಪುರುಷ ಮತ್ತು ಮಹಿಳೆಯಲ್ಲಿ ಸ್ಪರ್ಧೆಯಾಗಿ ಕಂಡು ಬರುತ್ತದೆ. ದುರ್ಯೋಧನ ದ್ರೌಪದಿಯನ್ನು "ನೆತ್ತ" ವಾಡಲು ಒಪ್ಪಿಕೊಂಡ ನೆತ್ತವಾಟದಲ್ಲಿ ದುರ್ಯೋಧನ ಪಳಗಿದ್ದ ಆದರೆ ದ್ರೌಪದಿ ಚಾಣಾಕ್ಷತನ ಹಾಗೂ ಕೈಚಳಕದಿಂದಾಗಿ "ನೆತ್ತ" ವಾಟವಾಡುವುದರಲ್ಲಿ ನಿಸ್ಸಿಮಳಾಗಿದ್ದಳು. ದುರ್ಯೋಧನನ ಅಹಂಕಾರ ಅವನಲ್ಲಿದ್ದ ಸ್ವಾರ್ಥ ಮೋಸ ಆತ್ಮವಿಶ್ವಾಸ ಹಗೆತನದ ಮುಖವಾಡಗಳನ್ನು ನೆತ್ತವಾಡುವದರ ಮುಲಕ ಅವನು ಸೋಲುವಂತೆ ಅವನ ಮುಖವಾಡ ಕಳಚಿ ಬೀಳುವಂತೆ ದ್ರೌಪದಿ ಮಾಡುತ್ತಾಳೆ. ಹಮ್ಮು, ಗರ್ವ, ಬಿಮ್ಮುಗಳೆಲ್ಲಾ ದುರ್ಯೋಧನನಲ್ಲಿ ಇಳಿದು ಹೋದವು ಒಂದೊಂದೇ ಸೋಲನ್ನು ಅನುಭವಿಸಿ ಶೂಲಿಯ ಬಂದಂತೆ.

ಹಾಕಲಾ ದ್ರವ್ಯಗಳ ನಾನಿನ್ನ ನೂಕನು ಪಾದದಲ್ಲೇ
ಹನ್ಮಲಾ ದ್ರವ್ಯಗಳ ನಾನಿನ್ನ ಚಿಮ್ಮೇನು ಪಾದದಲ್ಲೇ

ಎನ್ನುವಲ್ಲಿ ತನ್ನ ಇಡೀ ಕುಟುಂಬವನ್ನು ಬೀದಿ ಪಾಲು ಮಾಡಿದ್ದಲ್ಲದೇ. ನನ್ನ ಅಂಶ ಮಹಿಳಾ ಶೋಷಣೆ ಹಾಗೂ ಅವಮಾನಗಳನ್ನು ಕಂಡ ದ್ರೌಪದಿ ತನ್ನ ಆತ್ಮವಿಶ್ವಾಸ ಸ್ವಾಭಿಮಾನ ಸೇಡಿಗೆ ಪ್ರತಿ ಸೇಡು ತೀರಿಸಿಕೊಳ್ಳುವಲ್ಲಿ ಸದಾ ಮುಂಜಾಗ್ರತೆಯ ಹೊಂದಿ ಪ್ರತಿ ಹಂತದಲ್ಲೂ ತನ್ನ ಸಾಮರ್ಥ್ಯಎತ್ತಿ ತೋರಿಸುವ ಕೆಲಸವನ್ನು ದ್ರೌಪದಿ ಮಾಡುತ್ತಾಳೆ. ಇದೊಂದು ಮಹಿಳಾ ಸಂಖ್ಯೆಗೆ ಒಂದು ನಿದರ್ಶನ ಅತ್ಯುತ್ತಮವಾದ ಮಾದರಿಯಾಗಿದೆ. ನೆತ್ತವಾಟ ರಂಗೇರಿ ಭಯ ಆತಂಕದಲ್ಲಿ ತಲ್ಲೀನರಾದ ಹೊತ್ತಿನಲ್ಲಿ ದುರ್ಯೋಧನ ತನ್ನ ತಾನು ಸ್ಥಿಮಿತತೆ ಕಳೆದುಕೊಳ್ಳುವ ಹೊತ್ತಿಗಾಗಲೇ ದ್ರೌಪದಿಯ ಸೀರೆ ಒಂದಿಷ್ಟು ಸರಿಯುತ್ತದೆ. ಅದನ್ನು ಕಂಡು ದ್ರೌಪದಿ ಉಪಯೋಗ ತೆಗೆದುಕೊಳ್ಳುತ್ತಾಳೆ.

ಹದಿನಾರು ಮೊಳದ ಬಾರ್ಕೋರ ಸೀರೆಯ
ಬೋರೆಂಬ ಗಾಳಿ ಬೀಸಿ ಸ್ಯಾಲ ಮಗುಚಾಡೆ
ಸೆಳೆದಾವು ಕೌರವನ ಸತಿ ತೊಡೆ
ಮತ್ತೇರಿ ಸಪ್ರನವ ತೆರೆನಾಗಿ
ಪಗುಡೇಯ ಆಟವಾಡುತ್ತ ಸೋತನೆ
ಸತಿ ದ್ರೌಪದಿಗೆ ಗೆಲುವಾಗೆ ನನ್ನ
ಅರಮನೆಯ ಗೌಡಿ ಚಾಕರಿಗೆ ಸಮವಾಗಿ

ದುರ್ಯೋಧನ ಆಟದಲ್ಲಿ ಗೆದ್ದು ದ್ರೌಪದಿಯ ವಶಪಡಿಸಿಕೊಳ್ಳಬೇಕೆಂಬ ಸಂಚು ಹೂಡಿದ ತಕ್ಷಣವೇ ಗಾಳಿ ಬೀಸಿದ ಸಮಯವನ್ನು ದ್ರೌಪದಿ ತನ್ನ ತೊಡೆಯನ್ನು ದುರ್ಯೋಧನನಿಗೆ ತೋರಿಸಿ ಅವನ ಮನಸ್ಸನ್ನು ಚಂಚಲಗೊಳಿಸಿದ್ದಳು. ದ್ರೌಪದಿಯಲ್ಲಿದ್ದ ಚಾಣಾಕ್ಷತನ ಹಾಗೂ ಬುದ್ಧಿ ಶಕ್ತಿಯನ್ನು ಉಪಯೋಗ ಮಾಡಿಕೊಂಡು ತನ್ನ ಶಕ್ತಿ ಪ್ರದರ್ಶಿಸಿದಳು ಪುರಷ ಪ್ರಧಾನವಾದ ಅಧಿಕಾರಕ್ಕೆ ತನಗಾದ ಅವಮಾನ ಶೋಷಣೆಗಳನ್ನು ಪ್ರತಿಭಟನೆ ಮೂಲಕ ಎತ್ತಿ ಹಿಡಿಯುವುದರ ಮೂಲಕ ದ್ರೌಪದಿ ಜನಪದ ಸಾಹಿತ್ಯದಲ್ಲಿ ಪ್ರತಿಭಟನೆಯ ಬಂಡಾಯದ ಕತ್ತಿ ಹರಿಸಿದ್ದಾಳೆ.

ಮಹಾಭಾರತದಲ್ಲಿ ತನ್ನ ಮುಡಿಯನ್ನು ದ್ರೌಪದಿ ಇಲ್ಲಿ ಯಾರ ಸಹಾಯದಿಂದಲೂ ಕಟ್ಟಿಕೊಳ್ಳದೇ ಆ ಪಗಡೆ ಆಟವಾಡುವಾಗಲೇ ಗೆದ್ದ ಸಂಭ್ರಮದಲ್ಲಿ ಪಗಡೆಯಿಂದಲೇ ದುರ್ಯೋಧನನ ಹಣೆಗೆ ಹೊಡೆದು ಅಲ್ಲಿಂದ ಬಂದ ರಕ್ತದಿಂದ ತನ್ನ ಕೂದಲು (ಮುಡಿ) ಕಟ್ಟಿಕೊಂಡದ್ದು ಸ್ತ್ರೀಯ ಒಂದು ಪ್ರತಿಭಟನೆ ಇಲ್ಲಿ ವ್ಯಕ್ತವಾಗಿದೆ. ಜನಪದ ಮಹಾಭಾರತ ಹಾಗೂ ಶಿಷ್ಟ ಮಹಾಭಾರತದ ಕಾವ್ಯಗಳು ಭಿನ್ನರೂಪತಾಳಲು ಸಾಧ್ಯವಾಗಿದೆ. ಜನಪದ ರಾಮಾಯಣ ಸೀತೆಯನ್ನು ನಾವು ಪುರುಷ ಪ್ರಧಾನ ಅಧಿಕಾರದ ದಾಹದಲ್ಲಿರುವಂತೆ ಪ್ರತಿಭಟಿಸಿದ್ದಾರೆ. ದ್ರೌಪದಿ ಮಹಾಭಾರತದಲ್ಲಿ ಸ್ತ್ರೀ ಶಕ್ತಿ ಸಮೂಹದ ಪ್ರತೀಕವಾಗಿ ಪ್ರತಿಭಟಿಸಿದ್ದಾಳೆ.

ಅಲ್ಲದೇ ನಮ್ಮ ಉತ್ತರ ಕರ್ನಾಟಕ ಹಾಗೂ ಹೈದ್ರಾಬಾದ ಕರ್ನಾಟಕದ ಜನಪದ ಹಾಡುಗಳಲ್ಲಿ ಸಹಿತ ಬೇಕಾದ ಹಾಗೇ ಆಚರಣೆ-ಹಾಗೂ ಮಹಿಳಾ ಪ್ರತಿಭಟನೆ ದೊರಕುತ್ತವೆ. ಅದೇ ಮೈಸೂರು ಮಂಡ್ಯದಂತಹ ಜಿಲ್ಲೆಗಳಲ್ಲಿ 'ಕುಂತಿ ಪೂಜೆ' ಅತ್ಯಂತ ಚಾಲ್ತಿಯಲ್ಲಿರುವ ಆಚರಣೆ ಇಡೀ ಕರ್ನಾಟಕದ ಎಲ್ಲಾ ಭಾಗಗಳಿಗೂ ಇದು ಗೊತ್ತಿದೆ. ಇಲ್ಲಿ ಮುಖ್ಯವಾದ ಸಂಗತಿಯೆಂದರೆ ಮದುವೆಯ ಪೂರ್ವದಲ್ಲಿಯೇ ಕುಂತಿ ಮಗನನ್ನು ಪಡೆಯುವುದು ಮದುವೆಯಾದ ನಂತರ ತನ್ನ ಗಂಡನಿಂಲೇ ಒಪ್ಪಿಗೆ ಪಡೆದುಕೊಂಡು ತಾನು ತನ್ನ ಸಂತಾನದ ನಿಯೋಗ ಪದ್ಧತಿಯ ಮೂಲಕ ಮಗನನ್ನು ಹೆರುವ ರೀತಿ ಸಮಾಜ-ಅಧಿಕಾರ ರಾಜ್ಯ ಪ್ರಭುತ್ವ ವ್ಯವಸ್ಥೆ ಕಟ್ಟುಪಾಡುಗಳನ್ನು ತಿರಸ್ಕರಿಸಿದ್ದಾಳೆ. ಅವನ್ನ ದೂರಿಕರಿಸಿ ಭಿನ್ನವಾದ ಹೊಸದಾದ ತನ್ನ ಕಲ್ಪನೆ ಹಾಗೂ ವಾಸ್ತವದ ಹಿನ್ನೆಲೆಯಲ್ಲಿ ಸಂತಾನ ಪಡೆಯುವುದು ಗಂಭೀರವಾಗಿ ಕಂಡು ಬರುತ್ತದೆ. ಇಷ್ಟೆಲ್ಲ ಸಮಾಜವನ್ನು ತಿರಸ್ಕರಿಸಿದರೂ ಸಹಿತ ಜನಪದರೆಲ್ಲರೂ ಮುಕ್ತವಾಗಿ ಅವರಿಗೆಲ್ಲ ಕುಂತಿ ಕುಂತಿಯ ಪೂಜೆಯನ್ನು ಮಾಡುತ್ತಿರುವುದು ಪೂಜಿಸುವುದು ಸಂತಾನ ದೇವತೆಯೆಂದು ನಂಬಿ ಸೂಚಿಸಿರುವುದು ಚಿಂತನೆಗೆ ಒಳಪಡಿಸುತ್ತವೆ.

ನಮ್ಮಲ್ಲಿ ಮಹಾಕಾವ್ಯಗಳಿಗೆ ಕೊರತೆಯೇನಿಲ್ಲ. ತುಳು ನಾಡಿನ ಸಿರಿ ಎಂಬಕಾವ್ಯದಲ್ಲಿ ಸಹಿತ ತುಳ ಜಾನಪದ ಸಾಹಿತ್ಯದಲ್ಲಿ ಪಾಡ್ದನಗಳು ವಿಶಿಷ್ಟವಾಗಿ ಕಂಡು ಬರುವ ಸಾಹಿತ್ಯದ ಪ್ರಕಾರ ಕರ್ನಾಟಕದ ಯಾವ ಭಾಗದಲ್ಲಿ ಸಹಿತ ದೊರೆಯಲಾರವು. ಪಾಡ್ದನ ಎನ್ನುವ ಪ್ರಕಾರ ಮೂಲಗಳನ್ನು ಮಾತ್ರ ಸಂಸ್ಕೃತಿಯ ಪ್ರಧಾನ ಧಾರೆಗಳನ್ನು ಹಾಡುವುದು ಆ ಎಳೆಗಳನ್ನು ಹಿಡಿದುಕೊಂಡು ವಿಶಿಷ್ಟ ಸಂಸ್ಕೃತಿಗಳ ಮೂಲಕ ನಾಯಿಕೆಯರಲ್ಲಿ ಸ್ತ್ರೀ ಶಕ್ತಿಯಾಗಿ ಮಹಿಳೆ ಪ್ರಧಾನತೆ ಎತ್ತಿತೋರಿಸುತ್ತಾರೆ.

'ಸಿರಿ' ಕಾವ್ಯದಲ್ಲಿ ಸಿರಿಯೇ ಕಾವ್ಯದ ಕೇಂದ್ರ ವಸ್ತು ಪಾತ್ರ. ಮುಖ್ಯವಾಗಿ ತುಳುನಾಡಿನ ಬಂಟಜಾತಿಗೆ ಸೇರಿದ ಆ ಕುಟುಂಬದ ಸುತ್ತ ಹೆಣೆದುಕೊಂಡಿರುವ ಆ ಮಹಿಳೆಯ ಏಳು-ಬೀಳು ಸಾಮೂಹಿಕ ಕಟ್ಟು ಪಾಡುಗಳು. ಎಲ್ಲವನ್ನೂ ವಿವರಿಸುವ ದಾಖಲಿಸುವ ಕೆಲಸ ಕಾವ್ಯ ಮಾಡುತ್ತ ಬಂದಿರುವುದೇ ಇಲ್ಲಿಯ ಮುಖ್ಯ ಕಾಳಜಿಯಾಗಿದೆ. ಬಂಟ ಜನಾಂಗಕ್ಕೆ ಸೇರಿದ ಬೆರ್ಮ ಆಳ್ವ ಸತ್ಯನಾತುರದ ಯಜಮಾನನು ಹರಕೆ ಹೊತ್ತು ಹೆತ್ತ ಮಗಳು ಸಿರಿ ಅಲ್ಲಿಯೇ ಇದ್ದು. ಬಸೂರಿನ ಕಾಂತ ಪ್ರಂಜನೊಂದಿಗೆ ಸಿರಿಯ ವಿವಾಹವಾಗುತ್ತದೆ. ತವರು ಮನೆಯಿಂದ ಸಿರಿ ಬಸರಿಯಾದಾಗ ತಂದೆ ಸೀರೆಯನ್ನು ಕಾಂತಪ್ರಂಜ ತನ್ನ ವೇಶ್ಯೆಗೆ ತೆಗೆದುಕೊಂಡು ಹೋಗಿ ಕೊಟ್ಟನು. ಇದನ್ನು ತಿಳಿದ ಸಿರಿ ಕಿಡಿಯಾದಳು. ಅಲ್ಲದೇ ಸೀಮಂತನದ ದಿವಸ ಅದೇ ಸೀರೆ ಮಾಡಲು ಕೊಟ್ಟರೆ ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದಳು. ಅಲ್ಲದೇ ತನ್ನ ಗಂಡನ ನೀತಿಯನ್ನು ಕಂಡು ಅಸಹ್ಯಪಟ್ಟುಕೊಂಡಳು. ಕೂಡಲೇ ತನ್ನದೇ ಆದ ದಾರಿ ಕಾಣಲು ಕಾಂತ ಪ್ರಂಜನಿಗೆ ವಿಚ್ಛೇದನವನ್ನು ಹೊಂದಲು ನಿರ್ಧರಿಸಿದಳು. ಬೆರ್ಮ ಆಳ್ವನು ತೀರಿ ಹೋದ್ದರಿಂದ ಸಿರಿಯ ನ್ಯಾಯ ಪಂಚಾಯತಿಗೆ ಬಂದಾಗ ಕೊನೆಗೆ ಆಕೆಗೆ ಗಂಡನ ಮನೆ ಹಾಗೂ ತವರು ಮನೆಯಲ್ಲಿ ಆಸ್ತಿ-ಹಕ್ಕು ಯಾವುವು ದೊರೆಯುವುದಿಲ್ಲ. ಆದರೂ ಅವನ್ನೆಲ್ಲ ಬಯಸದೇ ಸ್ವಯಂಸ್ಫೂರ್ತಿಯಿಂದ ಸ್ವಾಭಿಮಾನದ ಕಟ್ಟಿನಿಂದ ಆಕೆ ಹೊರಬರುತ್ತಾಳೆ. ತನ್ನ ಅರಮನೆಯ ಕಂಬಕ್ಕೆ ತನ್ನ ಕುತ್ತಿಗೆಗೆ ಕಟ್ಟಿದ ಕರಿಮಣಿ. ಕೈಬಳೆ. ಮೂಗುತಿ ಕಿತ್ತು ಹಾಕಿ ಕಟ್ಟುತ್ತಾಳೆ. ಅದರೊಂದಿಗೆ ಸವಾಲನ್ನು ಹಾಕುತ್ತಾಳೆ.

"ನಿಮ್ಮ ಹೆಗಲಿಗೆ ನೊಗ ಇರಿಸಿ. ಕೊರಳಿಗೆ ನೇಗಿಲುಕಟ್ಟಿ ಯಾವಾಗ ನನ್ನ ಕಾಂತ ಬುಡಕ್ಕೆ ಬರುತ್ತಿರೋ. ಯಾವಾಗ ನಿಮಗೆ ಎರಡಲಿ ಎತ್ತಿಗೂ ಕಳಸೆ ಬಿತ್ರಿಗೂ (ಭತ್ರ) ಕೊರತೆ ಬರುತ್ತದೋ ಆಗ ನಾವು ನೀವು ಜೊತೆಯಾಗೋಣ" ಎಂಬ ಆವೇಶ-ಸಿಟ್ಟು-ಕಿಚ್ಚು ಕೋಪದಿಂದಲೇ ಪ್ರತಿಭಟಿಸಿ ಗಂಡನನ್ನು ಸಂಪೂರ್ಣವಾಗಿ ಪ್ರತಿರೋಧಿಸಿ ವಿಚ್ಛೇದನ ಕೊಡಲು ಮುಂದೆ ಬರುತ್ತಾಳೆ.

ಕೊನೆಗೆ ಕೆಲದಿನಗಳಾದ ಮೇಲೆ ಸಿರಿಗೆ ಮಗ ಹುಟ್ಟಿದ ಅವನೇ ಕುಮಾರ ಈ ಸದಾಚಾರ ಪ್ರರೋಢದಿಂದಲೇ 'ಕೊಡಸರಾಳ್ವ' ಎಂಬುದನ್ನು ಕಂಡು ಸಿರಿ ಮರುಮದುವೆಯಾಗುತ್ತಾಳೆ. ಆಗ ತನ್ನ ಮಗ ಕುಮಾರ ಎದುರಿಗಿದ್ದರೂ ಸಹ ಆಕೆ ಮರುಮದುವೆ ಆಗಿ ನಿಲ್ಲುತ್ತಾಳೆ. ಇಲ್ಲಿ ಸಿರಿ ಕಾವ್ಯದಲ್ಲಿ ಸಿರಿಯು ತನ್ನ ಪಾವಿತ್ರ್ಯದ ಕಟ್ಟುಪಾಡುಗಳನ್ನು ಮೀರಿ ಹೊಸಬಗೆಯ ಆಲೋಚಿಸಿದ್ದಲ್ಲದೇ ಪಿತೃ ವ್ಯವಸ್ಥೆ ಸಂಪೂರ್ಣವಾಗಿ ತಿರಸ್ಕರಿಸುತ್ತಾಳೆ. ಒಬ್ಬ ಮಹಿಳೆ ನಾಡಿನ ಸಂಪೂರ್ಣ ಕೇಂದ್ರ ಮಹಿಳಾ

ಶಕ್ತಿಯಾಗಿ ಹೊರಬಂದು ಜೀವಪರವಾದ ಸಂಸ್ಕೃತಿ ನಿರ್ಮಾಣಕ್ಕೆ ನಾಂದಿ ಹಾಡುತ್ತಾಳೆ. ಆತ್ಮಗೌರವ. ಸ್ವಾಭಿಮಾನ. ಶಿಷ್ಟ್ಯಗಳನ್ನು ಹೊಂದಿರುವ ತನ್ನ ತನವನ್ನು ಹಾಗೇ ಉಳಿಸಿಕೊಂಡು ಪುರುಷ ಪ್ರಧಾನ ಸಮಾಜದ ಬೇರನ್ನು ಕಿತ್ತುಹಾಕಲು ಪ್ರಯತ್ನಿಸಿದ್ದಾಳೆ. ಅಲ್ಲದೇ ಸವಾಲು ಹಾಕಿಕೊಂಡು ಎದುರಿಸುವ ಅನೇಕ ಸಮಸ್ಯೆಗಳಿದ್ದರೂ ಅವನ್ನೆಲ್ಲಾ ಬದಿಗೊತ್ತಿ ಮಹಿಳಾ ಶಕ್ತಿಗೆ ಹೊಸ ಭಾಷೆಯನ್ನು ಸಿರಿ ಬರೆಯುತ್ತಾಳೆ.

ಬಲಜೇವು ಮಾನಿಗ ಎಂಬ ಕರಾವಳಿ ಪ್ರದೇಶದ ಕಾವ್ಯದಲ್ಲಿ ಮಾತ್ರ ಪ್ರಧಾನ ವ್ಯವಸ್ಥೆಯಲ್ಲಿ ಮದುವೆಯ ಸಂದರ್ಭಗಳು ನಡೆಯುವ ಬಗೆಗಳನ್ನು ವಿವರಿಸುತ್ತದೆ. ವಧುದಕ್ಷಿಣೆ ಪ್ರಾಚೀನ ಕಾಲದಿಂದಲೂ ಇದೆ. ಇಲ್ಲಿ ಮಾತೃ ಪ್ರಧಾನ ವ್ಯವಸ್ಥೆಗೆ ಅನುಗುಣವಾಗಿ ಬಲ್ಲಾಳ ಮಾನಿಯ ಗಂಡನಾದುದ್ದರಿಂದ ಅವಳ ಹಕ್ಕು ಪ್ರತಿಪಾದನೆ ಮಾಡುತ್ತಾಳೆ. ಮಾನಿಗ ತನ್ನನ್ನು ಆ ತೆರೆಕೊಡದೇ ವಿವಾಹವಾದನೆಂದು ಬಲ್ಲಾಳನನ್ನು ತಿರಸ್ಕರಿಸುತ್ತಾಳೆ. ಬಲ್ಲಾಳನೆಂಬ ವ್ಯಕ್ತಿ ಪುರುಷ ಪ್ರಧಾನವಾದ ಸಂಸ್ಕೃತಿಯ ಪ್ರತಿರೋಧವನ್ನು ವಿರೋಧಿಸುವ ಮೂಲಕ ಪ್ರತಿಭಟನೆ ವ್ಯಕ್ತಪಡಿಸಿದ್ದಾಳೆ. ತನ್ನ ತಾಯಿಯ ವಸ್ತು ಸಂಪತ್ತು ತನ್ನದೆಂದು ಪ್ರತಿಪಾದಿಸುತ್ತಾಳೆ. ಗಂಡನ ಮನೆಗೆ ಹೋಗುವುದನ್ನು ಸಂಪೂರ್ಣ ನಿರಾಕರಿಸುತ್ತಾಳೆ. ತವರಲ್ಲಿಯೇ ಉಳಿದುಕೊಂಡ ಗಂಡನನ್ನು ವಿರೋಧಿಸುವ ನೆಲೆಕಂಡು ಬರುತ್ತದೆ. ಕೊನೆಗೆ ತನ್ನ ಅಣ್ಣನ ಮೇರೆಗೆ ತವರಿಂದ ಗಂಡನ ಮನೆಗೆ ಹೋಗಲು ನಿರ್ಧರಿಸುತ್ತಾಳೆ. ಬಲ್ಲಾಳನ ಮನೆಗೆ ಬಂದು ಸೇರುತ್ತಾಳೆ.

ಬಲ್ಲಳನೊಂದಿಗೆ ಪಗಡೆ (ಚನ್ನೆ) ಆಟವಾಡಲು ನನಗೆ ಎನುಬೇಡವೇ ಚಿನ್ನದ ಮಣಿ ಮುತ್ತಿನ ಕಾಯಿಯೇ ಬೇಕೆಂದು ಪಂಥಕ್ಕೆ ಆಹ್ವಾನ ಒಡ್ಡುವಳು. ಇದರಂತೆ ನಾನು ಯಶಸ್ವಿಯಾದಾಗ ಬಲ್ಲಾಳ ಆಟದಲ್ಲಿ ಸೋತು ನಿಂತಾಗ ಮಾನಿಗ ಕಂಡು ಅಪಹಾಸ್ಯ ಮಾಡುತ್ತಾಳೆ. ಕೊನೆಗೆ ಆಟದಲ್ಲಿ ಬಲ್ಲಾಳ ತಾನು ಸೋಲುವುದನ್ನು ಕಂಡಾಗಲೇ ಅವನ ತಿರಸ್ಕರಿಸಿ ತಾನೆ ಗೆಲ್ಲಬೇಕೆಂಬ ಪ್ರತಿತಂತ್ರವನ್ನು ಹೂಡುತ್ತಾಳೆ. ಇದರಿಂದ ಕೊನೆ ಹಂತದಲ್ಲಿ ಮಾನಿಗ ಸೋಲನ್ನು ಅನುಭವಿಸಬೇಕಾಯಿತು. ಕೂಡಲೇ ಇದನ್ನರಿತ ಆಕೆ ಚನ್ನೆಮಣಿ ಸರವನ್ನು ತನ್ನ ಕಾಲಿನಿಂದ ಒದ್ದು ಪ್ರತಿಭಟಿಸುತ್ತಾಳೆ. ಆಗ ಗಂಡ ಎಂಬ ಅಧಿಕಾರವಾಣಿಯಿಂದ ದರ್ಪದಿಂದ ಆಕೆಯನ್ನು ಥಳಿಸುತ್ತಾನೆ. ಹೊಡೆತನ ಕಂಡುಕೊಂಡವಳೇ ತಾನು ವಿರೋಧ ಮಾಡಿದ್ದನೆಂದು ಭಾವಿಸುತ್ತಾಳೆ. ಕೊನೆಗೆ ತಾನು ಮಾಡಿದ್ದು ತಪ್ಪು ಎಂದು ಗೊತ್ತಾದ ಮೇಲೂ ಸಹಿತ ಮಾನಿಗನನ್ನು ಪರಿಪರಿಯಾಗಿ ಬೇಡಿಕೊಂಡ ಬಲ್ಲಾಳನನ್ನು ಆಕೆ ಮತ್ತೆ ನಿರಾಕರಿಸಿ ತವರಿಗೆ ಹೋಗುವ ನಿರ್ಧಾರ ಕೈಗೊಳ್ಳುತ್ತಾಳೆ. ಇಲ್ಲಿ ತನ್ನ ಛಲ ಸ್ವಾಭಿಮಾನ ಬಿಡದೇ ಹೊರಟೇ ಹೋಗುತ್ತಾಳೆ. ಬಲ್ಲಾಳ

ಕೊನೆಗೆ ಕೆಲ ದಿವಸ ಆಕೆಯ ಕಡೆಗೆ ಹೋಗದೇ ನಂತರದಲ್ಲಿ ದಂಡಿಯನ್ನು ತೆಗೆದುಕೊಂಡು ಅವಳನ್ನು ಕರೆಕಳುಹಿಸಲು ಹೇಳುತ್ತಾನೆ. ದಂಡಿಗೆಯನ್ನು ನೋಡಿದ ಮಾನಿನ ತನ್ನ ಕರಿಮಣಿ. ಕಾಲುಂಗುರ. ಮೂಗುತಿ ಕಿತ್ತು ಹಾಕಿ ಒಂದು ಪೊರಕೆಗೆ ಸೀರಿ ಉಡಿಸಿ ಒಡವೆಗಳನ್ನು ಹಾಕಿಕೊಂಡು ದಂಡಿಯಲ್ಲಿಟ್ಟು ಕಳುಹಿಸುತ್ತಾಳೆ.

ಮರಳಿ ಬಂದ ದಂಡಿಯನ್ನು ಕಂಡು ತನ್ನ ಹೆಂಡತಿ ಬಂದಳೆಂದು ಸಂತೋಷಭರಿತನಾಗಿ. ಇನ್ನೇನು ತನಗೆ ಸ್ವರ್ಗವೇ ಸಿಕ್ಕಿತೆಂದು ಭಾವಿಸಿದ ಬಲ್ಲಾಳನ ಸಡಗರ. ಸಂಭ್ರಮದಿಂದ. ಸಂತೋಷದಿಂದ ಬಂದು ಬಾಗಿಲನ್ನು ತೆಗೆದು ನೋಡುತ್ತಾನೆ. ಪೊರಕೆಗೆ ಸೀರೆ ಕರಿಮಣಿ. ಮೂಗುತಿ ಅದಕ್ಕೆ ಹಾಕಿದ್ದಾಳೆ. ಸ್ತ್ರೀ ಸಂಕೇತ ಹಾಗೂ ಪುರುಷನ ನಿಯಂತ್ರಣದ ಸಂಕೇತಗಳನ್ನು ತಿರಸ್ಕರಿಸಿದ ಮೇಲೆ ಅವನ್ನು ಸಂಪೂರ್ಣವಾಗಿ ನಿರಾಕರಿಸಿದ್ದು ಕಂಡು ಹೆಂಡತಿಯಲ್ಲ ಎಂದು ನಿರ್ಧರಿಸುತ್ತಾನೆ. ಆಕೆಯ ಮೇಲೆ ಸಂಪೂರ್ಣ ಸ್ವಾಭಿಮಾನ. ಪ್ರೀತಿ ಹೊರಟು ಹೋಗಿ ದ್ವೇಷಿಸಲು ನಿಲ್ಲುತ್ತಾನೆ.

ಬಲ್ಲಾಳ ಇದರಿಂದ ಬೇಸರಗೊಂಡ ಜುಮಾದಿಗೆ ಹರಕೆ ಹೊತ್ತು ಮಾನಿಗ ತನ್ನ ಮನೆಗೆ ತಾನೆ ಹೊರಬರಬೇಕು ಅರಮನೆ ಸೇರಬೇಕೆಂದು ಮಾಡಿಸುತ್ತಾನೆ. ಅದರಂತೆ ಅರಮನೆಗೆ ಒಂದು ದಿವಸ ಹುಚ್ಚು ಹಿಡಿದು ಮಾನಿನಿ ಅದರಂತೆ ಬಂದು ಬಿಡುತ್ತಾಳೆ. ಅರಮನೆ ಬಾಗಿಲಲ್ಲಿ ಆಕೆಯನ್ನು ತಡೆಯುತ್ತಾನೆ ಆಗ ಹೊರ ಸತ್ಯದಿಂದ ಒಳಗೆ ಹೋಗು ಎಂದು ತಾನು ಆಡಿದ ಮಾತಿನಿಂದ ಮಾನಿನಿ ತನ್ನ ಹುಚ್ಚು ಇದ್ದರು ಹೊಸ್ತಿಲು ದಾಟುವ ಹೊತ್ತಿಗೆ ತನ್ನ ಸಾವು ತಾನೆ ತಂದುಕೊಂಡುಬಿಡುತ್ತಾಳೆ. ಹೀಗಾಗಿ ಮಾನಿನಿ ಬಲ್ಲಾಳನ ಅಂದರೆ ಪುರುಷ ಪ್ರಧಾನತೆಗೆ ಆಕೆ ಮಹತ್ವ ಕೊಡಲಿಲ್ಲ. ನಿರಾಕರಿಸುವ ಮೂಲಕ ಸಾವನ್ನು ಬರಮಾಡಿಕೊಂಡಳೇ ಹೊರತು ರಾಜಿಯಾಗಲಿಲ್ಲ. ಇಂತಹ ನೋವುಗಳಲ್ಲಿ ಸ್ತ್ರೀ ಮಹಿಳಾ ಪರವಾದ ಶಕ್ತಿ ಆತ್ಮಗೌರ, ಸ್ವಾಭಿಮಾನ ಹಾಗೂ ಎಲ್ಲವೂ ಕೂಡ ವ್ಯಕ್ತವಾಗುತ್ತವೆ. ಹಾಗೇ ಮಾನಿಗ ಈ ಮೂಲಕ ಪ್ರತಿಭಟಿಸಿ ಗೆಲುವನ್ನು ಹೊರ ಹಾಕುತ್ತಾಳೆ. ಇಂತಹ ನೂರಾರು ಚಿತ್ರಣಗಳು ತುಳುಪಾಡ್ದನಗಳಂತಹ ಕಾವ್ಯಗಳಲ್ಲಿ ನಿರೂಪಿತಗೊಂಡಿವೆ.

'ಸೊಸೇರ ಹಬ್ಬ ಆಚರಣೆ' ಗಳಲ್ಲಿ ಮಹಿಳಾ ಪ್ರತಿಭಟನೆ ಕಂಡು ಬರುವುದಿಲ್ಲ ಆದರೆ ಸೂಕ್ಷ್ಮವಾದ ಹಂತದಲ್ಲಿ ಕಾಣುತ್ತೇವೆ. ಅಭಿವ್ಯಕ್ತ ಕುಟುಂಬದ ಪರಂಪರೆಯಲ್ಲಿ ಸೊಸೆಯನ್ನು ನಡೆಸಿಕೊಳ್ಳುವ ರೀತಿ ಅನ್ಯಾಯವಾದದ್ದು ನಮ್ಮ ಭಾರತೀಯ ಸಂಸ್ಕೃತಿ ಪುರಾಣವೇದ ಆಗಮಗಳ ಸಹಿತ ಅತ್ತೆ ಎಷ್ಟೋ ಬೈದರೂ ಹೊಡೆದರೂ ಹಿಂಸಿಸಿದರೂ ಅದನ್ನೆಲ್ಲಾ ಸಹಿಸಿಕೊಂಡು ಬಾಳಬೇಕು. ನೋವುಗಳನ್ನು ಮಾತ್ರ

ಹೊರಹಾಕುವಂತಿಲ್ಲವೆಂಬ ನಿರ್ಬಂಧವನ್ನು ಹಾಕಿದ್ದಾರೆ. 'ಉತ್ತಮರ ಮಗಳಾಗಿ ಹೆತ್ತವರಿಗೆ ಹೆಸರು ತಂದೆ' ಅತ್ತೆ, ಮಾವ, ಗಂಡ, ನೆಗೆಣಿ, ಭಾವ ಇವರಲ್ಲದೇ ಸುತ್ತೇಳು ನೆರೆಗಂಜಿ ಬದುಕು ಸಾಗಿಸುವ ಹೆಣ್ಣಿನ ನೋವು ಜನಪದ ಗೀತೆಗಳಲ್ಲಿ ಸಾಕಷ್ಟು ವ್ಯಕ್ತವಾಗಿದೆ.

ಈ ಅಭಿವ್ಯಕ್ತಿ ಕುಟುಂಬ ಹುಬ್ಬಳ್ಳಿ ತಾಲ್ಲೂಕಿನ ಕೋಳಿವಾಡ ಗ್ರಾಮದಲ್ಲಿ ನಡೆದುಕೊಂಡು ಬಂದಿವೆ. ಆದರೆ ಇಲ್ಲಿ ನೋವು ಅನುಭವಿಸಿ ಕುಟುಂಬದ ವ್ಯವಸ್ಥೆ ಧಾರೆಯೆರೆದು ಮಾನವನನ್ನು ಪ್ರತಿನಿಧಿಸುವ ಕಾರ್ಯ ನಡೆದಿದೆ. ಮಹಿಳಾ ಸೂತ್ರ ಹಾಕಿಕೊಂಡು ಬಂದ ಸೊಸೇರ ಹಬ್ಬ ಆಚರಣೆ ಮೇಲ್ವರ್ಗದ ಕುಟುಂಬದ ಸೊಸೆಗೆ ಹೆಚ್ಚು ಸಂಬಂಧಿಸಿದ್ದಾಗಿದೆ.

ಇಂತಹ ಕುಟುಂಬ ಜಮೀನ್ದಾರ ಮನೆತನದ ಸೊಸೆ ಕೊನೆಗೆ ಮುದ್ದಾದ ಗಂಡುಮಗುವಿಗೆ ಜನ್ಮ ನೀಡುತ್ತಾಳೆ. ಬಂದು ಬಳಗದೊಡನೆ ಜಾವಳ (ಚಾಲ) ತೆಗೆಯುವ ಸಂಪ್ರದಾಯವನ್ನು ಪ್ರಾರಂಭಿಸುತ್ತಾರೆ. ಮನೆಯ ಹಿರಿಯರೆಲ್ಲರು ಊರನ್ನು ಆಹ್ವಾನಿಸಿದ್ದರೆ ಹೊಸ್ತಿಲಗೆ ಆಮಂತ್ರಣ ಇಟ್ಟು ಬರುತ್ತಾರೆ. ಇಲ್ಲಿ ಅನ್ನ ಸಂತರ್ಪಣೆ ನಡೆಯುತ್ತದೆ. ಜಾವಳ ಕಾರ್ಯಕ್ರಮ ಸಂಪ್ರದಾಯದಂತೆ ನಡೆಯಬೇಕಾದದ್ದು ನಡೆಯುತ್ತದೆ. ಊರ ಜನರೆಲ್ಲರೂ ಬಂದು ಉಂಡು ಸಂತೃಪ್ತರಾದರು. ಮುಂಜಾನೆಯಿಂದ ರಾತ್ರಿಯವರೆಗೂ ನಿರಂತರ ಅನ್ನಸಂತರ್ಪಣೆ ನಡೆಯಿತ್ತು. ಮನೆಯ ಹಿರಿಯರು ಎಲ್ಲರೂ ಎಲ್ಲಾ ಮಾಡುತ್ತಾರೆ. ಆದರೆ ಸೊಸೆ ಮುಂಜಾನೆಯ ಜಾವಳ ಕಾರ್ಯ ಮುಗಿದು. ಎಲ್ಲರೂ ಬಂದವರು ಹೋದವರು ಎಲ್ಲರೂ ಹೋದರೂ ಕೂಡ ಸೊಸೆಯನ್ನು ಮಾತ್ರ ಯಾರೂ ಉಂಡರೋ ಇಲ್ಲವೋ ಗೊತ್ತಿಲ್ಲ. ಆಕೆಯನ್ನು ಯಾರೂ ಕೇಳಲಿಲ್ಲ, ಕೇಳುವ ಗೊಡವೆಗೆ ಹೋಗಲಿಲ್ಲ. ಮಗು ಅತ್ತರು ನಕ್ಕರು ಎಲ್ಲವು ಹೈರಾಣಾಗಿ ನೋಡಿಕೊಂಡಿದ್ದಳು ಇಡೀ ದಿನ ಕೆಲಸ ಮಾಡಿ ಮಾಡಿ ರೋಸಿ ಹೋಗುತ್ತದೆ. ಒಂದು ಸಲವಾದರೂ ನನ್ನ ಯಾರೂ ಕೇಳಿಲ್ಲವೆಂಬ ಬೇಸರ ದುಃಖ ಹಿಮ್ಮೆಳೆಸಿ ಬಂದಿತ್ತು ಏನು ನನ್ನ ಜನ್ಮ ನಾನೇನು ತಿಳಿದುಕೊಂಡೆ ಆದರೆ ಇವರ್‍ಯಾರು ನನಗೆ ಕೇರ್ ಮಾಡಲಿಲ್ಲ ಎಂದು ತಿಳಿದು ಅದೇ ಊರಲ್ಲಿದ್ದ ತನ್ನ ತವರಿಗೆ ಹೋಗಿ ಕೂತಳು.

ತವರು ಮನೆಯವರು ಎಲ್ಲರೂ ಆಕೆಯನ್ನು ಕಂಡು ದಿಗಿಲಾಗುತ್ತದೆ. ಏನು ಇಷ್ಟು ರಾತ್ರಿಯಲ್ಲಿ ಕೂಸನ್ನು ಕರೆದುಕೊಂಡು ಬಂದಿರುವೆ, ರಾತ್ರಿ ಹೊತ್ತಿನಲ್ಲಿ ಮುಂಜಾನೆಯು ದುಡಿದು ಹಸಿವು ದುಃಖ ನೋವಿನಿಂದ ಬಂದ ಮಗಳ ಕ್ಷೇಮ ಕೇಳುತ್ತಾರೆ. ಆದರೆ ಕೇಳಿದ ತವರಿನವರೂ ಕೊಡುವ ಉತ್ತರ ಅಸಹಾಯಕವಾಗಿರುತ್ತದೆ. ನೀನು ಇಲ್ಲಿರುವುದು ಸೂಕ್ತವಲ್ಲ ಗಂಡನ ಮನೆಗೆ ಹೋಗುವ ಸಲಹೆ ಕೊಡುತ್ತಾರೆ. ಇಲ್ಲಿಯೂ ಪ್ರಧಾನವಾದ

ಪುರುಷನ ಆಕ್ರಮಣ ವ್ಯವಸ್ಥೆ ಶಾಸ್ತ್ರ, ಸಂಪ್ರದಾಯಗಳು, ಕಟ್ಟುಪಾಡುಗಳು ಕಂಡು ಗಂಡನ ಮನೆ ತವರಲ್ಲಿಯೂ ಸಹ ಮಹಿಳೆ ಭದ್ರತೆಯಿಲ್ಲದೆ ಸ್ವಾತಂತ್ರ್ಯ ಇಲ್ಲ ಎಂಬುವುದು ಗೊತ್ತಾಗುತ್ತದೆ. ಕೊನೆಗೂ ಚಿಂತಿಸಿ ಗಂಡನ ಮನೆಗೆ ನಡು ರಾತ್ರಿ ಬರುತ್ತಾಳೆ. ಆ ಹೊತ್ತಿಗೆ ವೃಕ್ಷವನ್ನು ಪ್ರಾರ್ಥಿಸಿಕೊಂಡಳು ಆಗ ದೇವ ವೃಕ್ಷ ಈಕೆಯ ಪ್ರಾರ್ಥನೆ ಒಪ್ಪಿ ತನ್ನ ವೃಕ್ಷದೂತದಲ್ಲಿ ಸೇರಿಸಿಕೊಳ್ಳುತ್ತದೆ. ಮನೆಯವರು ರಾತ್ರಿ ಎಲ್ಲಾ ಮಲಗಿದ ಮೇಲೆ ಜಾವಳ ತೆಗೆದ ಮೊಮ್ಮಗನನ್ನು ಸೊಸೆಯನ್ನು ಹುಡುಕುತ್ತಾರೆ. ಯಾರಿಗೂ ತಿಳಿಯುವುದಿಲ್ಲ ಅಳು, ನಗು ಕೂಸಿನ ಶಬ್ದ ಇಲ್ಲವೆಂದು ಹುಡುಕಿದರು ಮನೆ ಮುಂದಿನ ವೃಕ್ಷದ ಒಡಲಲ್ಲಿ ಸೊಸೆ ಸೇರಿ ಹಾಗು ಮಗುವಿನ ಹಿಮ್ಮಡಿ ಕಾಣಿಸುತ್ತದೆ. ಆಗ ಸೊಸೆ ಸಂಪೂರ್ಣವಾಗಿ ನೆನಪಾಗಿ ತಾವು ಮರೆತದ್ದು ತಪ್ಪೆಂದು ಮನೆಯವರು ಅಂದುಕೊಂಡು ಪಶ್ಚಾತ್ತಾಪ ಪಟ್ಟರು. ಅವಳಿಗೆ ಮನ್ನಣೆ ಸಿಗಲಿಲ್ಲವೆಂಬ ಕಾರಣದಿಂದ ಸೂಕ್ತ ಸ್ಥಾನ ಮಾನ ಒದಗಿಸಬೇಕೆಂದು ನಿರ್ಧರಿಸಿಕೊಂಡು ಪ್ರತಿವರ್ಷ ಹೊಸ್ತಿಲ ಹುಣ್ಣಿಮೆಯ ದಿನ ಮನೆಯ ಸೊಸೆಯಂದಿರಿಗೆ ಮನ್ನಣೆ ಸಲ್ಲಿಸುವ ಸಂಕೇತವಾಗಿ ಸೊಸೇರ ಹಬ್ಬ ಆಚರಣೆಗೆ ಬಂದಿತು. ಈ ಆಚರಣೆ ಕುಲ ಧರ್ಮ ಎಂದು ಕರೆದಿದ್ದಾರೆ. ಇಂತಹ ಹಬ್ಬದ ಆಚರಣೆಯ ಮೂಲಕ ಅಭಿವ್ಯಕ್ತಗೊಂಡ ಪುರುಷ ಪ್ರಧಾನ ವ್ಯವಸ್ಥೆ ಕುಟುಂಬ ಮನೆಗಳ ರೀತಿ ನೀತಿ ಅಲ್ಲಿಯ ಎಲ್ಲಾ ವಿಚಾರಗಳು ದಾಖಲಾಗಿದ್ದನ್ನು ನೋಡಬಹುದಾಗಿದೆ. ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ ಗಂಡನ ಮನೆಯಲ್ಲಿ ಉಣ್ಣುವ ಅನ್ನದ ಹಕ್ಕಿಗೂ ಆಕೆಗೆ ಸ್ವಾತಂತ್ರ್ಯವಿರಲಿಲ್ಲ. ಹಾಗೇ ಪಿತೃ ಪ್ರಧಾನವಾದ ತವರು ಮನೆಯು ಆಕೆ ಕಡೆಗಣಿಸುತ್ತದೆ. ಇಲ್ಲಿ ಗಂಡನ ಮನೆ ಹಾಗೂ ತವರಿಗೂ ತನ್ನ ಸಾವನ್ನು ಮಾನವಾಗಿ ಪ್ರತಿಭಟಿಸಿ ಬುದ್ಧಿ ಕಲಿಸುವ ವಿಧಾನವನ್ನು ನಾವು ಇಂತಹ ಹಂತದಲ್ಲಿ ನೋಡುತ್ತೇವೆ. ಸೊಸೆಯಂದಿರು ಸಮಾಜದಲ್ಲಿ ಸಲ್ಲಬೇಕಾಗುವ ಹಕ್ಕು ಗೌರವ ಸಮಾನತೆಗಳು ಹಾತೊರೆಯುವ ಅಂಶಗಳು ಬೆಳಕಿಗೆ ಎದ್ದು ಕಾಣುತ್ತವೆ. ಆತ್ಮಗೌರವ ಸ್ವಾಭಿಮಾನದ ಸಂಕೇತವಾಗಿ ಹೊರಬಂದಿವೆ.

ಶಿರಸಿಮಾರಮ್ಮಾ-ಮಹಿಳಾ ಶಕ್ತಿಯ ದೇವತೆಗಳನ್ನು ಕಂಡಿದ್ದಾಳೆ. ಅನೇಕ ನಮ್ಮಲ್ಲಿ ಮಹಾನ ಶ್ರೇಷ್ಠ ಉಗ್ರ ದೇವತೆಗಳು ಇದ್ದಾರೆ. ಅವರಲ್ಲಿ ಶಿರಸಿ ಮಾರಮ್ಮಾ ಕೂಡ ಒಬ್ಬಳು. ಇಲ್ಲಿ ಶಿಷ್ಟ ಜನಪದ ಪುರಾಣ, ಮಹಾಕಾವ್ಯಗಳಲ್ಲಿ ಸಹಿತ ಮಹಿಳೆಯರ ಶೀಲ, ಪಾವಿತ್ರ್ಯತೆ ಒರೆಗಲ್ಲಿಗೆ ಹಚ್ಚಿ ನೋಡುವ ಬಗೆ ವಿಶಿಷ್ಟವಾದದ್ದು ಯಾರೂ ಕೂಡ ನಿರಾಕರಿಸದೇ ಇರುವ ಹಾಗೆ ಚಿತ್ರಣಗೊಂಡಿರುತ್ತಾರೆ. ಸೀತೆ, ಅಹಲ್ಯೆ, ದ್ರೌಪದಿ, ಶಬರಿ ಹೀಗೆ ಸಾವಿರಾರು ಮಹಿಳೆಯರ ಚಿತ್ರಣವನ್ನು ಕಂಡಾಗ ಅವುಗಳಲ್ಲಿಯ ಪುರುಷ ಪ್ರಧಾನ ವ್ಯವಸ್ಥೆ ತಲ್ಲಣಿಸಿ ಹೋಗಿದ್ದಾರೆ. ಹಾಗೇ ದೇವಾನುದೇವತೆಗಳೆಂದು ಕರೆದು ಜನಪದ ದೇವತೆ ಸೌದತ್ತಿ ಯಲ್ಲಮ್ಮ ಶೋಷಿತರ ದೇವತೆ ತನ್ನ ಪಾವಿತ್ರ್ಯತೆ ತೋರಿಸುವ ಪತಿ ಜಮದಗ್ನಿಗೆ ಅವನ

ಕೋಪಕ್ಕೆ ಬಲಿಯಾಗಿ ಕಷ್ಟಕ್ಕೆ ಗುರಿಯಾಗಿದ್ದಳು. ಅದರಂತೆ ಶಿರಸಿ ಮಾರಮ್ಮನ ಕತೆ ಬೇರೆಯಾದರೂ ಜನಪದ ಸ್ತ್ರೀದೇವತೆಗಲ ಚಿತ್ರಣವು ಇಲ್ಲಾಗಿದೆ. ಅನ್ಯಾಯ ಮಾಡಿದ ಗಂಡನನ್ನು ತಿರಸ್ಕರಿಸುವ ಮೂಲಕ ಅವನನ್ನು ಸಂಹಾರ ಮಾಡಿ ಇಡೀ ಪುರುಷ ಸಮಾಜ ಪ್ರತಿಭಟಿಸಿದ ಆಕೆಯ ವಿಚಾರ ಧಾರೆಗಳು ಆಕೆಯ ಬಲವಂತತೆ ಕಂಡರೆ ಅಲ್ಲಿ ಶಕ್ತಿ ದೇವತೆಯಾಗಿ ಹೊರ ಬಂದಿದ್ದಾಳೆ.

ಶಿರಸಿ ಮಾರಮ್ಮನನ್ನು ಒಬ್ಬ ಸಮಗಾರ ಈಕೆಯ ಚೆಲುವಿಕೆ ಕಂಡು ಮನಸೋತು ನಂಬಿಸಿ ಮದುವೆಯಾಗುತ್ತಾನೆ. ಆಗ ಆಕೆ ಬ್ರಾಹ್ಮಣವೆಂಬ ತಿಳದು ನಾನು ಬ್ರಾಹ್ಮಣನೆಂಬ ಸುಳ್ಳು ಹೇಳಿ ಮದುವೆ ಮಾಡಿಕೊಂಡು ಹಾಗೆ ಮಗುವನ್ನು ಹಡೆದರು ಬ್ರಾಹ್ಮಣ ಎಂದಾಗ ಆಕೆ ಒಪ್ಪಿ ಮದುವೆಯಾದಳು. ಅವನು ಒಂದು ದಿನವು ಆಕೆಗೆ ಗೊತ್ತಾಗದಂತೆ ಮನೆ ಬಿಟ್ಟು ದೂರ ಹೋಗಿ ಚಪ್ಪಲಿ ಹೊಲೆದು ಹಣ ತಂದು ಕೊಡುವ ಕಸಬು ಕೈಗೊಂಡ ಹೀಗೆ ಮಾಡುವ ಗಂಡನ ಮೇಲೆ ಒಂದು ದಿನವೂ ಅನುಮಾನ ಬರಲಿಲ್ಲ. ಒಂದು ದಿವಸ ಮಗು ಸಹಿತ ಅತ್ತು ಅತ್ತು ಹೋಗಿ ತಂದೆಯ ಜೊತೆಗೆ ಹೋದನು ಆಗ ಅಲ್ಲಿ ಬಿದ್ದಿದ್ದ ಚರ್ಮವನ್ನು ತೆಗೆದುಕೊಂಡು ಬಂದಿದ್ದ. ಇದು ಎಲ್ಲಿಯದೆಂದು ಹೆಂಡತಿ ವಿಚಾರಿಸಿದ್ದಾಳೆ. ಮಗು ತನ್ನ ತಂದೆ ಚಪ್ಪಲಿ ಹೊಲಿಯುವದರಲ್ಲಿಂದು ತಂದೇನೆಂದು ಹೇಳಿದನು. ಕೂಡಲೇ ಆಕೆಗೆ ಸಿಟ್ಟು, ಆವೇಶ ಬಂದು ನಾನು ಬ್ರಾಹ್ಮಣ ಅವನು ನನಗೆ ವಂಚನೆ ಮಾಡಿ ಕುಲ-ಕುಲ-ಪಾವಿತ್ರ್ಯತೆ ಹಾಳು ಮಾಡಿದ್ದನ್ನು ತಿಳಿದವಳೇ ಕ್ಷುದ್ರಳಾದವಳು ಆಗ ಗಂಡನನ್ನು ಮನಸ್ಸು ಉಳಿಸಬಾರದೆಂದು ಕಂಡು ಗೊಲ್ಲು ಹಿಡಿದು ಕೊಲ್ಲಬೇಕೆಂದು ಬೆನ್ನು ಹತ್ತುತ್ತಾಳೆ. ಬೆನ್ನು ಹತ್ತಿ ಹೋದವರು ಕೊನೆಗೆ ಗಂಡನ ಕೋಣ ಹೊಟ್ಟೆಯೊಳಗೆ ಹೋದರೆ ಮೂಗ ಕನಿಯ ಹೊಟ್ಟೆ ಪ್ರವೇಶಿಸಿದಳು. ಕನಿಕೋಣದ ಎರಡು ರುಂಡ ಕತ್ತರಿಸಿ ತನ್ನ ಸೇಡು ತೀರಿಸಿಕೊಂಡಳು. ನೋವು ಪ್ರತಿಭಟನೆಯ ರೂಪವಾಗಿ ಹೊರಹಾಕಿದ್ದು ಕಂಡು ಬರುತ್ತದೆ. ಇಂದಿಗೂ ಮಾರಮ್ಮನ ಬಲದಲ್ಲೂ ಕೋಣದ ರುಂಡ ಇಟ್ಟು ತೋರಿಸಲಾಗಿದೆ. ಇಂದಿಗೂ ಈ ಜಾತ್ರೆಯಲ್ಲಿ ರಾಣಸೀರರು-ಆಸಾರಿಗಳು ಒಬ್ಬರಿಗೊಬ್ಬರು ಬಯ್ಯುವ ರೂಢಿಸಹಿತ ಕಂಡುಬರುತ್ತದೆ. ಸಮಗಾರ ದೇವರಿಗೆ ಮಚ್ಚೆಪೆಟ್ಟು ಎಂಬ ಗಾದೆ ಜಗತ್ತಪ್ರಸಿದ್ಧವಾಗಿದೆ. ಗಾದೆಯ ಹಿನ್ನೆಲೆ ಅರಿತುಕೊಂಡಾಗ ಸಮಗಾರನೊಬ್ಬ ಹೇಗೆ ಮೇಲ್ವರ್ಗದವರ ಮಹಿಳೆಗೆ ಮೋಸ ಅವಮಾನ ಮಾಡಿದ ಅದಕ್ಕಾಗಿಯೇ ನಾವು ಅವನನ್ನು ಚಪ್ಪಲಿಯಿಂದ ಹೊಡೆದ ಅವಮಾನಿಸುವ ಕ್ರಿಯೆ ಬಂದಿರಬೇಕು. ಉದಾಹರಣೆ ಕೊಡುತ್ತಾರೆ ಡಾ॥ ಎಂ.ಎಂ.ಕಲ್ಬುರ್ಗಿಯವರು.

ಮಾರೆಮ್ಮ ಅನ್ಯಾಯದ ವಿರುದ್ಧ ಪ್ರತಿಭಟಿಸುತ್ತಾಳೆ. ಆ ಅನ್ಯಾಯಕ್ಕೆ ಗಂಡನೇ ಕಾರಣನೆಂದು ಗೊತ್ತಾದರೂ ಸಹಿತ ತನ್ನ ಪಾವಿತ್ರ್ಯತೆ ಮುತ್ತೈದಿತನಗಳು ಆತನಿಂದಲೆ ಆಗುವುದೆಂದು ಭಾವಿಸಿದ್ದರು ಸಹಿತ ಅವನ್ನೆಲ್ಲಾ ಮೀರಿ ಮಹಿಳೆ ಎಲ್ಲರಿಗಿಂತಲೂ ಸರಿಯಾಗಿ ಬಾಳಬಹುದೆಂದು ಸತ್ಯ ಹೇಳ ಹೆಣ್ಣಿನ ಶಕ್ತಿಯನ್ನು ಎತ್ತಿ ತೋರಿಸುತ್ತಾಳೆ.

**ಜನಪದ ಕಥೆಗಳಲ್ಲಿ ಮಹಿಳಾ ಪ್ರತಿಭಟನೆ:**

ಮೌಖಿಕ ಪರಂಪರೆಯೆಂದು ಕರೆಸಿಕೊಂಡು ಜನಪದ ಕಾವ್ಯ ಕಥೆಗಳಲ್ಲಿ ಕಾಣಸಿಗುವ ವೈವಿಧ್ಯತೆ ಬೇರೆಲ್ಲೂ ಕೂಡ ದೊರೆಯುವುದಿಲ್ಲ ಜನಪದ ಕಥೆಗಳಲ್ಲಿ ಸ್ತ್ರೀ ಶಕ್ತಿಯ ಆಶಯಗಳು ಬಲು ಗಟ್ಟಿಯಾಗಿ ನೆಲೆಗೊಂಡಿವೆ. ಪುರುಷನ ಪ್ರತಿಯೊಂದು ಕಾರ್ಯಚಟುವಟಿಕೆ ಯೋಜನೆಗಳಲ್ಲಿ ಹೊಸತಂತ್ರ ರೂಪಿಸಲು ಹೆಣಗಾಡುತ್ತಿದ್ದಾರೆ. ಅನೇಕ ಕಥೆಗಳಲ್ಲೂ ತಂತ್ರ ಪ್ರತಿತಂತ್ರ ರೂಪಿಸಿಕೊಂಡು ಕಥೆಗಳು ಬಂದಿವೆ. ಮಹಿಳೆ ತನ್ನ ಬದುಕನ್ನು ಆಯ್ಕೆ ಮಾಡಿಕೊಳ್ಳುವಲ್ಲಿ ಹಾಗೂ ತನ್ನ ದಾರಿ ಕಟ್ಟಿಕೊಳ್ಳಲು ತಾನೆ ಮುಂದೆ ಬಂದಿದ್ದಾಳೆ. ಆಕೆಗೆ ತನ್ನ ಸ್ವತಂತ್ರ ಅಸ್ತಿತ್ವ ಸ್ವಾತಂತ್ರ್ಯತೆ ಆಕೆಗಿದೆ ಎನ್ನುವ ಅಂಶಗಳು ಇಲ್ಲಿ ದಾಖಲಾಗಿವೆ ಅವುಗಳಲ್ಲಿ ಹಲವು ಕತೆಗಳು ಬರುತ್ತವೆ.

'ಕುಂಬಳಕಾಯಿ ಅಜ್ಜಿ' ಮೂಲ ಕಥೆ ಬಹು ಸ್ವಾರಸ್ಯವಾಗಿದೆ. ಒಂದೂರಲ್ಲಿ ಒಬ್ಬ ಅಜ್ಜಿ ಇದ್ದಳು ಅವಳಗೆ ಒಬ್ಬ ಮಗಳಿದ್ದಳು ತನ್ನೂರಿನ ಹತ್ತಿರದ ಹಳ್ಳಿಗೆ ಕೊಟ್ಟು ಮದುವೆ ಮಾಡಿದಳು. ಅಜ್ಜಿಗೆ ದಿನಕಳೆದಂತೆ ವಯಸ್ಸು ಹೆಚ್ಚಾಗುತ್ತಾ ಹೋಯಿತು. ಅಜ್ಜಿ ಮೊಮ್ಮಗಳನ್ನು ನೋಡಿಕೊಂಡು ಬರಬೇಕೆಂದು ಮನಸ್ಸಾಗಿ ಹೊರಟು ಹೋದಳು. ಕಾಡಿನಲ್ಲಿ ನರರವಾಸನೆ ಕಾಡು ಪ್ರಾಣಿಗಳಗೆ ಬರುತ್ತದೆ. ಅಜ್ಜಿ ನೋಡಿ ನರಿ ಎಲ್ಲಿಗೆ ಹೊರಟೆ ಅಜ್ಜಿ, ಎಂದಾಗ ಆಗ ಅಜ್ಜಿ ಈಗ ನನ್ನನ್ನು ತಡೀ ಬ್ಯಾಡ ನಾನು ಮಗಳ ಮನೆಗೆ ಹೋಗಿ ರೊಟ್ಟಿತಿಂದು ಗಟ್ಯಾಗಿ ಬ್ಯಾಳ ತಿಂದ ಬೆಳ್ಳಗಾಗಿ ಬರುತ್ತೇನೆ. ಆಗ ನನ್ನ ತಿನ್ನುವಂತೆ ಎಂದಳು. ಇದೆ ತೆರನಗಿ ಒಂದೊಂದು ಹುಲಿ, ಸಿಂಹ, ಕ್ರೂರ ಪ್ರಾಣಿಗಳು ಸಹಿತ ಅಡ್ಡಗಟ್ಟಿ ನಿಂತವು. ಆಗ ನರಿಗೆ ಹೇಳದಂತೆ ಎಲ್ಲರಿಗೂ ಹೇಳ ತಾನು ಮಾತ್ರ ಪರಾರಿಯಾದಳು. ಒಟ್ಟಾರೆ ಅಜ್ಜಿ ಎಲ್ಲವನ್ನು ದಾಟಿ ಕಾಡು ಬಿಟ್ಟು ಮಗಳ ಮನೆಯನ್ನು ಸುರಕ್ಷಿತವಾಗಿ ಬಂದು ತಲುಪಿದಳು. ಈ ಕತೆ ಮಗಳಗೆ ಹೇಳದಳು. ಒಂದು ತಿಂಗಳ ಕಾಲ ಅಜ್ಜಿ ಎಲ್ಲೂ ಹೋಗದೆ ಮಗಳ ಮನೆಯಲ್ಲಿ ಜೀವನ ಪೂರೈಸಿಕೊಳ್ಳುತ್ತಾಳೆ. ಮಗಳು ಅಜ್ಜಿಯನ್ನು ಕೂಡ ಚೆನ್ನಾಗಿ ನೋಡಿಕೊಳ್ಳುವಳು. ಅಜ್ಜಿ ರೊಟ್ಟಿ ತಿಂದು ಗಟ್ಟಿಯಾದಳು, ಬೇಳೆ ತಿಂದು ಬೆಳ್ಳಗಾದಳು ಕೊನೆಗೆ ಊರ ತಲುಪಬೇಕಾದರೆ, ಕಾಡು ಪ್ರಾಣಿಗಳಮದ ಹೇಗೆ ತಪ್ಪಿಸಿಕೊಳ್ಳಬೇಕೆಂಬ ರೀತಿ ಅನನ್ಯವಾಗಿತ್ತು. ಮಗಳಗೆ ಹೇಳದಳು, ಆಗ ಹಿತ್ತಲ ಬಳ್ಳಿಯ

ದೊಡ್ಡ ಕುಂಬಳಕಾಯಿ ಇತ್ತು ಆ ಕುಂಬಳಕಾಯಲ್ಲಿ ಅಜ್ಜಿಯ ಕೂಡಿಸಿ ಬುಟ್ಟಿ ಕಟ್ಟಿ ಅದನ್ನು ನೂರೆಂಟು ಕುಂಬಳಕಾಯಿ ಉರುಳ ಹೊರಟವು ಕಾಡು ಪ್ರಾಣಿಗಳೆಲ್ಲವು ಅಜ್ಜಿಯ ದಾರಿ ಕಾಯುತ್ತಿದ್ದವು. ಕುಂಬಳಕಾಯಿ ಕಂಡು ಕಾಡು ಪ್ರಾಣಿಗಳು ಕುಂಬಳಾ, ಕುಂಬಳಾ ಅಲ್ಲೊಬ್ಬ ಮುದುಕಿ ಬರುತ್ತಿದೆಯೇ ಎಂದು ಕೇಳಿದವು. ಕುಂಬಳಕಾಯಿಯಲ್ಲಿರುವ ಮುದುಕಿ ಇಲ್ಲ ಸರಿ ಎಂದು ಹೇಳಿ ಪ್ರಾಣಿಗಳಿಂದ ತಪ್ಪಿಸಿಕೊಂಡಳು ಕೊನೆಗೆ ನರಿಗೆ ಮಾತ್ರ ಸಂಶಯ ಕಾಡಿತ್ತು. ನರಿ ದೊಡ್ಡ ಕಲ್ಲು ಕುಂಬಳಕಾಯಿಗೆ ಹಾಕಿ ಕುಂಬಳಕಾಯಿ ಒಡೆದು ಹೊರಬಂದ ಮುದುಕಿಯ ನೋಡಿ ಎಲ್ಲಾ ಪ್ರಾಣಿಗಳು ನಾನು ತಿನ್ನಬೇಕೆಂದು ಅವರಲ್ಲಿಯೇ ಜಗಳವಾಡಲು ಹತ್ತಿದವು. ಎಲ್ಲರ ಜಗಳ ನೋಡಿ ಮುದುಕಿ ಮನೆ ಸೇರಿದಳು ಈ ಕಥೆಯು ಮಹಿಳೆ ಕೂಡ ಪುರುಷ ಅವನಾಡುವ ಊರೇ ಪರಿಸ್ಥಿತಿಯಲ್ಲಿ ಸಹಾಯ ಕೇಳಲಸು ತಾನು ಬುದ್ಧಿವಂತಳಾದರೆ ಹೊರಬರಲು ಸಾಧ್ಯವೆಂದು ಮನವರಿಕೆಯಾಗುತ್ತದೆ.

ಹೆಣ್ಣು ಗಜನಿಂಬೆ ಹಣ್ಣು: ಒಂದು ಕಥೆ ದಯಸಪಾತನೆಂಬುವನಿಗೆ 7 ಜನ ಗಂಡುಮಕ್ಕಳು ಅವರು ಮದುವೆಗೆ ಬಂದಾಗ 7 ಜನರನ್ನು ಮದುವೆ ಮಾಡಲು ನಿರ್ಧರಿಸಿದ. ಕಿರಿಯ ಮಗ ಮದುವೆ ಬೇಡವೆಂದು ನಿರಾಕರಿಸುತ್ತಾನೆ. ಕಿರಿಯ ಸೊಸೆ ಸಂಗ ಮಾಡಿದ್ದು ಹೀಗಾಗಿ ಮಗನ ಮದುವೆ ಬೇಡವೆಂದನು. ಕಿರಿಯ ಮಗನಿಗೆ ಸೊಸೆಗೆ ಹೇಳಿ ಹಾರ ಹಾಕಿಸಿದ ತಂದೆ ಮದುವೆಯ ಮಾಡಲಾದ ದಿವಸ ತನ್ನ ಮುಖ ಎತ್ತಿ ಆಕೆಗೆ ನೋಡಲಿಲ್ಲ. ಆದರೆ ಆ ಕಿರಿಯ ಸೊಸೆ ಇದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಸ್ವತಃ ತಾನೇ ಕೆಲಸ ನಿರ್ವಹಿಸಿ ಮನೆ ಮಂದಿಗೆ ಪ್ರೀತಿಗೆ ಪಾತ್ರರಾಗುತ್ತಾಳೆ.

ಈಕೆ ಒಮ್ಮೆ ಹಾಲು ಕೊಡಲು ಹೋದಾಗ ಆ ಊರಿನ ರಾಜಕುಮಾರನ ಕಣ್ಣಿಗೆ ಬೀಳುತ್ತಾಳೆ. ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂದು ಕೇಳುತ್ತಾನೆ. ಇದರಿಂದ ಅರಮನೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆಂದು ಷರತ್ತು ಹಾಕಿದಳು. ಆ ಷರತ್ತು ಅವನು ಒಪ್ಪಿಕೊಂಡನು. ತನ್ನ ಕೊರಳಲ್ಲಿದ್ದ ಮುತ್ತಿನ ಸರವನ್ನು ಜಗ್ಗಿದನು. ಆಗ ಮುತ್ತುಗಳೆಲ್ಲಾ ಚೆಲ್ಲಾಪಿಲ್ಲಿಯಾದವು ಅವನ್ನು ಆರಿಸಿಕೊಳ್ಳಲು ನನ್ನ ಮುಟ್ಟಬಾರದೆಂದು ಹೇಳಿದಳು. ಹಾಗೆ ಮಾಡಲು ರಾಜಕುಮಾರ ಮುತ್ತು ಆರಿಸಲು ನಿಂತ ಆಗ ಈಕೆ ಪರಾರಿಯಾಗಿ ಮನೆಸೇರಿಕೊಂಡಳು.

ಒಂದು ದಿವಸ ಗಂಡನ ಸೂಳೆಯ ಮನೆಗೆ ಹಾಲು ಕೊಡಲು ಹೋದಳು ಇವಳ ಕೂದಲನ್ನು ನೋಡಿ ಆಕೆ ಮರಳಾಗುತ್ತಾಳೆ. ತನಗೂ ಇಂತಹ ಉದ್ಧವಾದ ಕೂದಲು ಹೇಗೆ ಆಗಬೇಕು. ಉಪಚಾರ ಕೇಳಿದಳು. ನೀನು ಬೋಳಿಸಿಕೊಂಡು ಒಂದು

ಪೋವುನರಸವನ್ನು ಹಾಕಿಕೊಂಡರೆ ಕೂದಲು ಉದ್ದವಾಗುವುದೆಂದಳು ನೀನು ಈ ರೀತಿ ಹೇಳದೆ. ಏನು ಕೊಡಲಿ ಎಂದಳು ಆಗ ನಿನ್ನದೊಂದು ಸೀರೆ ಕೊಡು ಎಂದಳು ಹಾಗೆ ಸೀರೆ ಕೊಟ್ಟಳು. ಮನೆಗೆ ಬಂದ ಸೊಸೆ ವೇಶ್ಯೆ ಕೊಟ್ಟ ಸೀರೆ ಉಟಕೊಂಡು ಉದ್ಧ ಕೂದಲ ಬಿಚ್ಚಕೊಂಡು ಓಡಾಡುತ್ತಾಳೆ. ಆಗ ಗಂಡ ವೇಶ್ಯೆ ತಲೆ ಬೋಳಿಸಿಕೊಂಡು ಇರುವುದನ್ನು ನೋಡಿ ಅಸಹ್ಯದಿಂದ ಮನೆಗೆ ಬಂದ ಆಗ ತನ್ನ ವೇಶ್ಯೆ ತೊಟ್ಟ ಸೀರೆತೊಟ್ಟ ನಡೆಯುವಳು ಯಾರೋ ಎಂದು ನೋಡಿ ತನ್ನ ಹೆಂಡಸತಿ ಎಂದು ಗೊತ್ತಾಯಿತು. ತನ್ನ ತಪ್ಪು ತಾನೇ ಅರಿತುಕೊಂಡ ಹೆಂಡತಿಯ ಜೊತೆ ನಡೆಯುವನು. ಪಾಪಾಸಿನ ಗಂಡ ಎನ್ನುವ ಕತೆ ತಾನು ಹೊಡೆಸಿಕೊಂಡ ಹೊಡೆಸಿಕೊಳ್ಳುವವಳನ್ನು ಮಾತ್ರ ಮದುವೆಯಾಗುವುದಾಗಿ ಒಬ್ಬ ಗಂಡು ಹೇಳುತ್ತಾನೆ. ಇವನ ಮಾತು ಕೇಳಿ ಒಬ್ಬ ಬುದ್ಧಿವಂತ ಮಹಿಳೆ ಒಪ್ಪಿದಳು ಆಗ ಮದುವೆಯಾಗಿ ಮೊದಲ ದಿನವೆ ಹೊಡೆಯಲು ಬಂದ ನೀನು ದುಡಿದುಕೊಂಡು ಬಾ ಆಗ ಹೊಡಿಯುವೆ ಎಂದಳು ದುಡಿಯಲು ಹೋಗಿ ಅಲ್ಲಿ ವೇಶ್ಯೆಯ ಸೇವಕನಾದ ಆಗ ಗಂಡು ವೇಷ ಧರಿಸಿ ಹೆಂಡತಿ ಅಲ್ಲಿಗೆ ಬರುತ್ತಾಳೆ. ಸೂಳೆಯನ್ನು ಪಗಡೆ ಆಟದಲ್ಲಿ ಸೋಲಿಸಿ ಸೇವಕನನ್ನು ಕಾಡಿಸಿ ಬಂದಳು ಮಾರು ವೇಷದಲ್ಲಿದ್ದ ತನ್ನ ಹೆಂಡತಿ ಎಂದು ಅರಿಯದೆ ತಾನು ದುಡಿದ ಸಂಪಾದಿಸಿದ ಹಣ ಎಲ್ಲಾ ಕೊಟ್ಟು ನಾನು ಇಂದು ನಿನಗೆ ಚೆನ್ನಾಗಿ ಹೊಡೆಯುತ್ತೇನೆ ಎಂದಳು. ಹೆಂಡತಿ ನಡೆದ ಸಂಗತಿ ತಿಳಿಸಿದಳು ಆಗ ಆತ ಮನಕರಗಿ ಕೂಡಿ ಇದ್ದು ಹೊಡೆಯದೆ ಬಿಡುತ್ತಾನೆ. ಇಂತಹ ಕತೆಗಳು ಜನರಲ್ಲಿ ಮಹಿಳಾ ಪ್ರತಿಭಟನೆ ಬುದ್ಧಿವಂತಿಕೆಯ ಕೆಲಸ ನಿರ್ವಹಿಸುವ ಸಂಗತಿಗಳು ಇಲ್ಲಿ ವ್ಯಕ್ತವಾಗಿವೆ. ಇಂತಹ ಹಲವಾರು ಜನಪದ ಕತೆಗಳು ಹೆಣ್ಣಿನ ಬುದ್ಧಿವಂತಿಕೆ ಚಾಣಾಕ್ಷತನ ಉಪಾಯದಿಂದ ಪಾರಾಗುವ ರೀತಿಗಳಲ್ಲಿ ಅವಳ ಸಾಮರ್ಥ್ಯ ಶಕ್ತಿಗಳಿಂದ ಹೆಣ್ಣು ಪುರುಷನಿಗೆ ಪ್ರತಿರೋಧವಾಗಿ ನಿಲ್ಲುವಳೆಂಬ ಅಂಶ ಸ್ಪಷ್ಟವಾಗುತ್ತದೆ.

**ಜನಪದ ಗಾದೆಗಳಲ್ಲಿ ಹೆಣ್ಣು:**

ಗಾದೆಗಳು ಜಪದದ ವೇದಗಳು, ವೇದ ಸುಳ್ಳಾದರು ಗಾದೆ ಸುಳ್ಳಾಗದು. ಅನುಭವದಿಂದ ಹೊರ ಬಂದದ್ದು, ಲೋಕ ರೂಢಿಯಲ್ಲಿ ಜಗತ್ಪ್ರಸಿದ್ಧವಾದದ್ದು. ಅನುಭವ ವಿವೇಕ ಸಾಮಾಜಿಕ ತತ್ವ, ನಿಯಮಗಳು, ನಂಬಿಕೆಗಳು ಸಹ ಗಾದೆಗಳಲ್ಲಿ ಹರಡಿವೆ. ಹಸಿಗೋಡೆಗೆ ಹಳ್ಳ ಹೊಡೆದಂತೆ ಪರಿಣಾಮಕಾರಿ ಹಾಗೂ ಪ್ರಭಾವ ಪ್ರಕಾರವಾಗಿ ಹರಿದು ಬಂದ ಗಾದೆಗಳು ಒಂದರ್ಥದಲ್ಲಿ ವಿಶ್ವಕೋಶಗಳಾಗಿವೆ. ಇಲ್ಲಿ ಸಂಸ್ಕೃತಿ ಗಾದೆ ಮಾತುಗಳಲ್ಲಿ ಪ್ರತಿಬಿಂಬಿಸಲಾಗಿದೆ.

ಹೆಣ್ಣಿನ ನೆಲೆ ತಿಳಿಯರು
ತವರಿಗೆ ಮಾತು ತಂದವಳು ಮಗಳಲ್ಲ
ತಾಮೊತ್ತಿ ಸೊಸೆಯಲ್ಲ
ಹೆಂಗಸರನ್ನು ನಂಬಬಾರದು
ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ
ಹತ್ತುರುಮಾಲೂ ಕೂಡಿದ್ರೂ ಎರಡು ಜಡಿಕೂಡಬಾರದು
ಹೆಂಗಸರ ಬಾಯಿ ಮುಚ್ಚಲು ಸಾಧ್ಯವಿಲ್ಲ

ಇಂದಿಗೂ ಗಾದೆಗಳು ನೂರಾರು ಸಾವಿರಾರು ದೊರಕದೇ ಇರುವಲ್ಲಿ ಹೆಣ್ಣು ಕೇವಲ ಪುರುಷರ ಅಧೀನದಲ್ಲಿಯೇ ಇರಬೇಕು ಎಂಬುವುದು ಗಾದೆ ಸ್ಪಷ್ಟಪಡಿಸಿದೆ. ಇದೇ ನೆರೆ ಗಾದೆಗಳು ಪ್ರತಿಭಟನೆ ಹೇಳುವುದು ಹೀಗಿವೆ.

ಗಂಡಸರನ್ನು ನಂಬಬಾರದು
ಹೆಣ್ಣಿನ ಬುದ್ಧಿ ಮೊಳಕಾಲ ಕೆಳಗಿದ್ರೆ। ಗಂಡಸಿನ ಬುದ್ಧಿ ಪಾದದ ಕೆಳಗೆ

ಒಲಿದರೆ ನಾರಿ ಮುನಿದರೆ ಮಾರಿ
ಹೆಣ್ಣಿಲ್ಲದ ಮನೆ ಮನೆಯಲ್ಲ

ಇಂತಹ ಗಾದೆಗಳನ್ನು ಹೆಣ್ಣಿನ ಸ್ತ್ರೀ ಶಕ್ತಿಯಾಗಿ ಪ್ರತಿಪಾದಿಸುತ್ತದೆ. ಗಾದೆಯೆ ತಾಯಿಗೆ ಇರುವ ಸ್ಥಾನ ನೀಡಿದೆ.

ತಾಯಿಗಿಂತ ದೇವರಿಲ್ಲ ಉಪ್ಪಿಗಿಂತ ರುಚಿಯಿಲ್ಲ
ತಾಯಿಗಿಂತ ಬಂಧುವಿಲ್ಲ
ರಾಜ ಆಳುವ ತಂದೆಗಿಂತ, ರಾಗಿ ಬೀಸೋ ತಾಯಿ ಮೇಲು
ನೀರಿಲ್ಲದ ಕೆರೆ, ತಾಯಿಲ್ಲದ ಮನೆ ಅಲ್ಲ

ಈ ರೀತಿಯಾಗಿ ನಮ್ಮಲ್ಲಿ ಜನಪದ ಸಮಾಜದಲ್ಲಿ ಮಹಿಳಾ ಪ್ರತಿಭಟನೆ ಕಾವ್ಯ, ಗೀತೆ, ಒಗಟು, ಗಾದೆಗಳಲ್ಲಿಯೂ ಪ್ರತಿರೋಧ ವ್ಯಕ್ತವಾಗುವ ಮೂಲಕ ಇಡೀ ಜನಪದ ಮಹಿಳೆ ತನ್ನ ಮೂಲ ಅಂತಸತ್ವವನ್ನು ಹೊರಹಾಕಿ ತನ್ನ ನಿಜವಾದ ಮಹಿಳೆ ಪ್ರತಿಭಟನೆಯನ್ನು ಹೊರಹಾಕಿದ್ದಾಳೆ.

# ಅಧ್ಯಾಯ–೫
# ಸಮಾರೋಪ

ಮನುಷ್ಯ ಜಗತ್ತು ಇತಿಹಾಸವೆಂದರೆ ಅದು ಕೇವಲ ಪುರುಷನ ಇತಿಹಾಸ. ಚರಿತ್ರೆ. ಜಗತ್ತು ಎಂದು ಭಾವಿಸುವುದುಂಟು. ಅವನಲ್ಲಿಯ ಶೌರ್ಯ. ಸಾಹಸ. ಆತನ ರೀತಿ–ನೀತಿಗಳಲ್ಲಿ ಹೋರಾಟ. ಬುದ್ಧಿವಂತಿಕೆ. ಚಾಣಾಕ್ಷತನದ ವಿಚಾರಗಳು. ಮಾಡುವ ಕೆಲಸದಲ್ಲಿರುವ ಛಲವಂತಿಕೆ. ಸ್ವಾಭಿಮಾನದ ಸಂಕೇತದ ನುಡಿಗಳು ಇವುಗಳೆಲ್ಲ ವೈಭವೀಕರಿಸಿ ಹಾಡಿ–ಹೋಗಳ. ಅವುಗಳೆಲ್ಲವೂ ತಮ್ಮದೆಂದು ಹೇಳುತ್ತಾ ಹೊಸದೊಂದು ಕನಸು ಕಟ್ಟಿಕೊಂಡು ಬೆಳವಣಿಗೆ ಆಗುತ್ತಿರುವ ಸಾಂಕೇತಿಕ ಗುಣ ಈ ನೆಲದಲ್ಲಿದೆ. ಹಾಗೇ ಇಂತಹ ಪುರುಷ ಪ್ರಧಾನ ವ್ಯವಸ್ಥೆಗೆ ಬೆನ್ನೆಲುಬಾಗಿ ನಿಂತುಕೊಂಡು ಹಗಲಿರುಳು ದುಡಿದ ಹಾಗೂ ದುಡಿಯುತ್ತಿರುವ ಸಮಾಜಕ್ಕೆ. ವ್ಯವಸ್ಥೆಯ ಸಾಂಸ್ಕೃತಿ ಇತಿಹಾಸಕ್ಕೆ ಮಹಿಳೆ ಕೊಟ್ಟ ಕೊಡುಗೆ ಅನನ್ಯ ಹಾಗೂ ಅಪರೂಪವಾದದ್ದು. ಜಗತ್ತಿನಲ್ಲಿಯೇ ಇಂತಹ ಮಹಿಳೆ ಮಾಡಿದ ಮಾಡುತ್ತಿರುವ ಕಾರ್ಯಗಳನ್ನು ಕಂಡರೆ ಅವುಗಳಲ್ಲಿ ದೂರಿಕರಿಸಿ ಇತಿಹಾಸ ಸಾಹಿತ್ಯ ಸಂಸ್ಕೃತಿಗಳು ಸಂಪೂರ್ಣವಾಗಿ ಅವಳ ಜೀವನ ಹಾಗೂ ಕಲೆಗಳನ್ನು ಅಲ್ಲದೆ ನೀತಿಯ ಕೊಡುಗೆಯನ್ನು ನಿರ್ದಾಕ್ಷಿಣ್ಯವಾಗಿ ಇತಿಹಾಸ ಚರಿತ್ರೆಗಳು ಸಹ ಆ ಪುಟಗಳಿಂದ ಅಳಿಸಿ ಹಾಕಿವೆ. ಮಹಿಳಾ ಸೃಜನಾತ್ಮಕ ಬದುಕು–ಬರಹ–ಕಲೆಗಳು. ಅಲ್ಲದೇ ಅವಳ ಕೊಡುಗೆ ಇಂದು ಅವಲೋಕಿಸಿದರೆ ಆಶ್ಚರ್ಯ ಹಾಗೂ ಭ್ರಮೆ ಹುಟ್ಟಿಸಿದ್ದಲ್ಲದೇ ಕುತೂಹಲವನ್ನು ಮೂಡಿಸುತ್ತದೆ. ಅವಳಲ್ಲಿ ಮೂಡಿದ ಸೃಜನಾತ್ಮಕ ಪ್ರತಿಭೆ. ಕಲೆ. ಸಾಹಿತ್ಯ. ಸ್ತ್ರೀ ಸಂಸ್ಕೃತಿಗಳ ಬದುಕಿನ ನಾನಾಭಾಗಗಳ ಚಿಂತನೆಗಳನ್ನು ಕೈಗೊಳ್ಳುತ್ತವೆ. ಇವುಗಳಿಂದ ಶೂನ್ಯತೆ ಎಂಬುವುದು ಪ್ರಸ್ತಾಪವಾಗುತ್ತವೆ.

ಮನುಷ್ಯ ಜಗತ್ತಿನ ಸಂಸ್ಕೃತಿಗೆ ಪ್ರಕೃತಿ ಹೇಗೆ ತನ್ನ ಕೊಡುಗೆ ಕೊಟ್ಟಿದೆ ಹಾಗೆ ಮಾನವ ಜನಾಂಗಕ್ಕೆ ಕಣ್ಣು ತೆರೆಸುವ ಸೃಷ್ಟಿಗೆ ಪ್ರಕೃತಿಯಂತೆ ಮಹಿಳೆ ಕೆಲಸ ನಿರ್ವಹಿಸಿದ್ದಾಳೆ. ಮಾನವನ ನಾಗರಿಕತೆಯನ್ನು ಸಂಸ್ಕೃತಿಯನ್ನು ಬೆಳೆಸಿ ಉಳಿಸಿದ್ದಲ್ಲಿ ಮಹಿಳಾ ಪಾತ್ರ ಮುಖ್ಯವಾದದ್ದು ಮನುಷ್ಯ ಕುಲವನ್ನು ಸಂರಕ್ಷಿಸಿ ಅದರ ನ್ಯಾಯಕ್ಕಾಗಿ ತನ್ನ ಹೋರಾಟ ಚಿಂತನೆಗಳ ಮೂಲಕ ಹೊರಹಾಕಿದ್ದು ಮಹಿಳೆಯನ್ನು ಎಂದೂ ಮರೆಯಬಾರದು. ಮಹಿಳೆ ಹೆರುವ ಯಂತ್ರವೆಂದು ಭಾವಿಸಲಾಗಿದೆ. ಮಹಿಳೆ ಗರ್ಭದಲ್ಲಿ ಧರಿಸುವ ಮೂಲಕ ಬಾಣಂತಿಯಾಗಿ. ಆ ಮಕ್ಕಳನ್ನು ಹೆರುವುದು. ಸಂತಾನದ ಪೋಷಣೆ ಮಕ್ಕಳು ಪಾಲನೆ–ಪೋಷಣೆ ಬೆಳವಣಿಗೆಗೆ ಮೂಲ ಕಾರಣವಾಗಿ ತನ್ನ ಅಂಧಕಾರದ ಬಹುಮುಖಿ ನೆಲೆಗಳಲ್ಲಿ ಜ್ಞಾನದ ಹೊನಲನ್ನು ಬಿತ್ತುವ ಕಾರ್ಯ ಕೈಗೊಳ್ಳಲಾಗಿದೆ. ಹೀಗೆ ಮಹಿಳೆ ತನ್ನನ್ನು ತಾನು ಸಂಪೂರ್ಣವಾಗಿ ಹುಟ್ಟಿದಾಗಿನಿಂದ ಹಿಡಿದು ಸಾಯುವತನಕ

ನಿರಂತರವಾದ ದೈಹಿಕ-ಮಾನಸಿಕ ದೌರ್ಬಲ್ಯಗಳನ್ನು ಅನುಭವಿಸುತಲೇ ಬರುತ್ತಾಳೆ. ಹೆಣ್ಣಾಗಿ ಹುಟ್ಟಿದ ತಪ್ಪಿಗಾಗಿ ಅನುಭವಿಸಬೇಕೆಂದು ಹೇಳುತ್ತಾರೆ. ಹೆಣ್ಣೆ ಈ ಜಗತ್ತಿನಲ್ಲಿ ಇರದಿದ್ದರೆ ಈ ಜಗತ್ತು ಇರುತ್ತಿರಲಿಲ್ಲ. ಹೀಗಿದ್ದಾಗಲೂ ಮಹಿಳೆಗೆ ಸಂಪೂರ್ಣ ಸ್ವಾತಂತ್ರ್ಯ ನೀಡದೇ ಅವಳು ಕೂಡ ನಮ್ಮ ನಿಮ್ಮಂತೆ ಮನುಷ್ಯಳೆಂದು ಸಾಬೀತಗೊಳಸದೇ ಜೈವಿಕ ಕಾರಣಗಳನ್ನು ಹಚ್ಚಿ ಆಕೆಗೆ ಹಣೆಪಟ್ಟಿಕಟ್ಟಿ ಹೀಗೆ ಆಕೆಯೆಂದು ಸಂಬೋಧಿಸುವ ಮೂಲಕ ಪುರುಷ ಪ್ರಧಾನ ವ್ಯವಸ್ಥೆ ಒಂದು ಕಣ್ಣಿಗೆ ಸುಣ್ಣ ಮತ್ತೊಂದು ಕಣ್ಣಿಗೆ ಬೆಣ್ಣೆ ಸವರುವ ಕಾರ್ಯ ತಂತ್ರಗಳನ್ನು ರೂಪಿಸಿಕೊಂಡಿತು. ಕೊನೆಗೆ ಮಹಿಳೆಯ ಅಬಲೆಯೆಂದು ಕರೆಯಲಾಯಿತು ನಿತ್ಯ ಶೋಣೆಯ ಮಧ್ಯದಲ್ಲಿ ಬಾಳಬೇಕಾದ ಸಂದೀಗ್ಧ ಪರಿಸ್ಥಿತಿ ನಿರ್ಮಾಣ ಮಾಡಿದರು. ಪುರುಷನೊಂದಿಗೆ ಸಮಾನವಾಗಿ ದುಡಿಯುವ ಮಹಿಳೆಗೆ ಸ್ವಾತಂತ್ರ್ಯ ಕೊಡಲಿಲ್ಲ ಅಲ್ಲದೇ ಆಕೆ ಮನೆಯಲ್ಲಿ ದುಡಿಯಬೇಕು ಮಕ್ಕಳ, ಪಾಲನೆ, ಪೋಷಣೆ ಮಾಡಬೇಕು. ಗಂಡಸರ ಆರೈಕೆ ಹಾಗೂ ಮನೆಯ ಸಂಪೂರ್ಣ ಜವಾಬ್ದಾರಿ ಹೊರಬೇಕು. ಮತ್ತೆ ಗಂಡಸರ ಜೊತೆಗೂಡಿ ಕೆಲಸ ಕಾರ್ಯಗಳನ್ನು ದಿನನಿತ್ಯದ ಚಟುವಟಿಕೆಗಳಲ್ಲಿ ನಿರಂತರತೆ ಸಾಧಿಸಬೇಕಾದ ಅನಿವಾರ್ಯತೆ ಹೊಂದಿದರು. ಆದರೆ ದುಡಿದು ಗಂಡಸರಿಗಿಂತ ಹೆಚ್ಚು ಕೆಲಸ ನಿರ್ವಹಿಸುವರು ಸಮಾನ ವೇತನವಿಲ್ಲದೇ ಅಲ್ಲಿಯೂ ಶೋಷಣೆ ಕಾಣುತ್ತೇವೆ. ಸ್ವಾತಂತ್ರ್ಯ ಕಿತ್ತುಕೊಂಡು ಮಾತನಾಡಲು ಕೂಡಾ ಹೇಳಲಾರದಂತೆ ಮುಕ್ತವಾಗಿ ಬಾಯಿಬಂದು ಮಾಡಲಾಯಿತು. ಪುರುಷ ಸಮಾಜ ಅವಳನ್ನು ತಮ್ಮ ಸ್ವಾಧಿನದಲ್ಲಿ ಇಟ್ಟುಕೊಂಡು ಅಧೀನಳನ್ನಾಗಿ ರೂಪಿಸಿದರು. ಪುರುಷನು ಬಿಟ್ಟರೆ ಆಕೆಗೆ ಎಲ್ಲೂ ಕೂಡಾ ನೈತಿಕ ಮಟ್ಟ ಉಳಿಯಲಾರದೆಂದು ಭಾವಿಸಲಾಗಿದೆ.

ಜಗತ್ತಿನಲ್ಲಿಯೇ ಯಾವ ದೇಶಗಳನ್ನು ತೆಗೆದುಕೊಂಡರೂ ಯಾವುದೇ ಹಳ್ಳಿಗಳನ್ನು ತೆಗೆದುಕೊಂಡರು ಜ್ಞಾನದ ಬೆಳಕಿನಿಂದ ವಂಚಿತಳಾಗಿ ದುರ್ಬಲಳಾಗಿ ತನ್ನ ಅಸ್ತಿತ್ವವನ್ನು ಸಂಪೂರ್ಣವಾಗಿ ಕಳೆದುಕೊಂಡು ಅಧೀನತೆ, ಆಶ್ರಯದ ನೆರಳಲ್ಲ ಕತ್ತಲಲ್ಲಿಯೇ ಬದುಕು ಕಾಣಬೇಕಾದ ಸಂದಿಗ್ಧ ಪರಿಸ್ಥಿತಿಗೆ ಒಗ್ಗಿ ಹೋದಳು. ಹುಟ್ಟಿನಿಂದ ಸಾಯುವತನಕ ಮಹಿಳೆ ಪಟ್ಟ ಕಷ್ಟ ಪಟ್ಟ ಪಾಡುಗಳು ನಮ್ಮ ಜಿವನದಲ್ಲಿಯೇ ಇತಿಹಾಸ ಸಾಹಿತ್ಯ ಸಂಸ್ಕೃತಿ ಚರಿತ್ರೆಯಲ್ಲಿ ಅಗಾಧವಾದದ್ದನ್ನು ಕಾಣುತ್ತೇವೆ.

ಪುರುಷ ಪ್ರಧಾನ ಜಗತ್ತಿನಲ್ಲಿ ಯಾವುದೇ ಹಿನ್ನೆಲೆಯ ಸಮಾಜದ ಮೂಲ ಆಸ್ತಿವಾದಗಳು ಕುಟುಂಬದಿಂದಲೇ ಹುಟ್ಟುತ್ತವೆ. ಈ ಕುಟುಂಬಳು ಮಹಿಳೆಯಿಂದಲೇ ಪ್ರಾರಂಭವಾಗುವ ಹಂತ ತಲುಪಿದ್ದನ್ನು ನೋಡಬಹುದಾಗಿದೆ. ಸಮಾಜ ಸಹ ಕುಟುಂಬ ಹಾಗೂ ಮಹಿಳೆಯ ಒಂದು ನಿರ್ದಿಷ್ಟ, ಪರಿಸರ, ಸಂದರ್ಭ, ಸನ್ನಿವೇಶಗಳು ಕಟ್ಟು ಹಾಕಿ

ನಿಶ್ಚಿತ ನೆಲೆಯನ್ನು ತಂದು ಕೊಡುತ್ತದೆ. ಮಹಿಳೆ ಇದಕ್ಕೆ ನೇರವಾಗಿ ಕಾರಣಳಾಗಿದ್ದಾಳೆ. ಪುರುಷ ಪ್ರಧಾನ ವ್ಯಸ್ಥೆ ಸೃಷ್ಟಿಸಿಕೊಂಡು ಬಂದಿದ್ದನ್ನು ಅನೇಕ ಮೂಲಗಳನ್ನು ಮಹಿಳೆ ಯಾವತ್ತು ನಿರಾಕರಿಸಿಲ್ಲ. ಅವು ಕೂಡಾ ತನ್ನ ಭಾಗ ಹಾಗೂ ಪ್ರಕಾರಗಳು ಹಾಕಿ ಕೊಟ್ಟ ಮಾರ್ಗವೆಂದು ಸಮನ್ವಯದ ಕಾರಣದಿಂದ ಸ್ವೀಕರಿಸಿಕೊಂಡು ಅದನ್ನು ಪಾಲಿಸಿಕೊಂಡು ಜಾರಿಗೆ ತರುವ ಪ್ರಯತ್ನ ಮಾಡಿದ್ದಾಳೆ. ಹೀಗೆ ಮಾಡುವ ಕ್ರಿಯೆಯೂ ಮಹಿಳೆಯ ಒಳಜಗತ್ತು, ಅಂತರಂಗದ ನುಡಿಗಳು ಹೊಸ ಬಗೆಯಿಂದ ಹೊರ ಬರುತ್ತಿರುವುದು ಕಾಣುತ್ತೇವೆ. ಆಕೆಯ ಒಳ ಜಗತ್ತಿನ ಅನಾವರಣದಲ್ಲಿಯೇ ಜನಪದ ಗೀತೆ, ಕಥನ, ಗೀತೆ, ತ್ರಿಪದಿ, ಗಾದೆ, ಒಗಟು, ಕಥೆಗಳಲ್ಲಿ ಮುಂತಾದ ಜನಪದ ಸಾಹಿತ್ಯ ಪ್ರಕಾರದಲ್ಲಿ ಮಹಿಳೆಯ ಒಳ ಜಗತ್ತಿನ ಏಳ್ಗೆಗಳು ದೊರಕಲು ಸಾಧ್ಯವಾಗಿದೆ. ಮಾತೃ ಪ್ರಧಾನ ವ್ಯವಸ್ಥೆ ಸಂಪೂರ್ಣವಗಿ ಅಳಿದು ಹೋದ ಮೇಲೆ ಆಕೆಗೆ ಯಾವ ನೈತಿಕ ಆಧಾರ ಬೆಂಬಲವು ಇಲ್ಲದೇ ನಿಲ್ಲಬೇಕಾಯಿತು. ನಂತರದಲ್ಲಿ ಪ್ರಭಾವಿ ರೂಪವಾಗಿ ಬೆಳೆದು ಬಂದ ಪಿತೃ ಪ್ರಧಾನ ವ್ಯವಸ್ಥೆ ಮೂಲಗಳನ್ನು ಹೊರಹಾಕಿ ಹೊಸ ಪ್ರಯತ್ನ ಆ ಪಿತೃಪ್ರಧಾನ ವ್ಯವಸ್ಥೆ ಮೂಲಗಳನ್ನು ಹೊರಹಾಕಿ ಹೊಸ ಪ್ರಯತ್ನ ಆ ಪಿತೃ ಪ್ರಧಾನ ವ್ಯವಸ್ಥೆ ಒಳಗಡೆ ಸೇರಿಸಿಕೊಳ್ಳಲಾಯಿತು. ಅಲ್ಲಿ ಪುರುಷ-ಮಹಿಳೆ ಎಂಬ ಲಿಂಗವನ್ನು ಆಧಾರವಾಗಿಟ್ಟುಕೊಂಡು ನೋಡಲಿಲ್ಲ. ಆ ಲಿಂಗ ತಾರತಮ್ಯತೆ ಮೀರಿ ಒಂದಾಗಿ ಬಾಳಲು ಹೊಂದಾಣಿಕೆ ಮಾಡಿಕೊಳ್ಳಲಾಯಿತು. ಆದರೆ ಅತಿಯಾದ ಪುರುಷ ಪ್ರಧಾನ ವ್ಯವಸೆಯಿಂದ ರೋಸಿ ಹೋದ ಮಹಿಳೆ ತನ್ನ ಅಸ್ತಿತ್ವ ಹಾಗೂ ಜೀವನದ ಭದ್ರತೆಗಾಗಿ ಹೊಸದೊಂದು ಕ್ರಮ ಕಾಣಲು ಬಯಸಿದಳು. ಲಿಂಗಾಧಾರಿತ ತಾರತಮ್ಯತೆ, ಪಿತೃ ಪ್ರಧಾನದ ನೀತಿಗಳು, ಸಹಿಸಿಕೊಂಡು ಶೋಷಣೆಗಳನ್ನು ಅನುಭವಿಸಿಕೊಂಡು ಕೊನೆಗೆ ಅವುಗಳ ವಿರುದ್ಧ ದಾಟಲು ಹಾಗು ಅದನ್ನು ವಿರೋಧಿಸಲು ಸಹ ಆಕೆ ಮುಂದೆ ಬಂದಳು. ಪ್ರಶ್ನಿಸಿ ಪ್ರತಿಭಟನೆ ತಾನು ಕೂಡಾ ಮಾನವ ಜೀವಿ. ಸಕಲ ಜೀವಿಗಳ ಲೇಸು ಬಯಸುವಾಗ ನನ್ನಂತಹ ಮಹಿಳೆ ಕೂಡಾ ಜೀವಿ ಎಂಬುದನ್ನು ಎತ್ತಿ ತೋರಿಸಿದಳು. ಇದನ್ನು ಮಾನವನ ಪ್ರತಿಭಟನೆಯನ್ನುವುದೇ ಗೊತ್ತಿದ್ದ ಸಂಗತಿಯಾಗಿದೆ.

ಮಹಿಳಾ ಜನಪದ ಕಥೆಗಳು ಬಹು ಸಾಹಿತ್ಯ ಪ್ರಕಾರದಿಂದ ಕೂಡಿದೆ. ಮಹಿಳಾ ಜೀವನದ ಬುದ್ಧಿವಂತಿಕೆ ಆಲೋಚನೆ, ತನ್ನ ಶಕ್ತಿ ಸಾಮರ್ಥ್ಯಗಳನ್ನು ಪ್ರತಿಪಾದಿಸಲು ಮುಂದೆ ಬಂದಿದೆ. ನಾಗರಿಕತೆಯಿಂದ ದೂರವಿದ್ದು ಸಂಸ್ಕೃತಿಗೆ ತನ್ನ ದೇಸಿತನ ಕಟ್ಟಿಕೊಟ್ಟು ಜಾನಪದವು ಅದರಲ್ಲೂ ಬುಡಕಟ್ಟು ಅಲೆಮಾರಿ ಜನಾಂಗಗಳು ಸಹಿತ ತನ್ನ ಜನಪ್ರೀಯತೆ ಸಾಧಿಸಿವೆ. ಮುಖ್ಯ ಪರಂಪರೆಯಲ್ಲಿ ಉಳಿದ ಜನಪದ ಸಾಹಿತ್ಯ ನಾಗರಿಕತೆಯಿಂದ ದೂರ ಉಳಿದಿದೆ. ಬುಡಕಟ್ಟು ಜನಾಂಗಗಳು ತನ್ನ ಅಸ್ತಿತ್ವ ನಿರೂಪಿಸುತ್ತವೆ. ಮೌಖಿಕ ಪರಂಪರೆ

ಜನಪದ ಸಾಹಿತ್ಯವಾಗಿ ಇದು ಸ್ಪುಟ ಸಂಪಾದನೆ ಪ್ರಕಟಣೆಗೊಂಡಿದೆ. ಸಂಶೋದನೆ-ವಿಮರ್ಶೆಗಳು ಹಾಗೂ ವಿವಿಧ ದೃಷ್ಟಿಕೋನಗಳಿಂದ ಜಗತ್ತಿನಾದ್ಯಂತ ಅಧ್ಯಯನವಾಗುತ್ತಾ ಬಂದಿದೆ. ಇದರಿಂದ ಮಾತೃ ಪ್ರಧಾನ ವ್ಯವಸ್ಥೆಗಳು ಮಹಿಳಾಸ ಕೇಂದ್ರದ ಶಕ್ತಿ ಕೇಂದ್ರಗಳಾಗಿ ಹೊರ ಹೊಮ್ಮಿದವು ಆದರೆ ಅದೇ ಮೌಖಿಕ ಜನಪದ ಸಾಹಿತ್ಯವು ಪುರುಷ ಪ್ರಧಾನವಾದ ವ್ಯವಸ್ಥೆಯಲ್ಲಿ ಸಿಲುಕಿ ಮೌಖಿಕ ನೆಲೆಗಳ ಉಳಿದುಕೊಂಡು ಬಂದಿದೆ. ಇಲ್ಲಿ ಪುರುಷ ಪ್ರಧಾನ ಹಾಗೂ ಮಾತೃ ಪ್ರಧಾನ ವ್ಯವಸ್ಥೆಗಿಂತ ಭಿನ್ನವಾಗಿ ಮಹಿಳಾ ಜನಪದ ಹೊರಬಂದಿದೆ.

ಮಹಿಳೆ ಇಲ್ಲಿಯೇ ತನ್ನ ಬಹುಮುಖಿ ನೆಲೆಗಳ ಅನಾವರಣಗೊಳಿಸಿ ದಾಖಲಿಸಲು ಸಹ ಪ್ರಯತ್ನಿಸಿದ್ದಾಳೆ. ಜನಪದ ರಾಮಾಯಣ, ಮಹಾಭಾರತ ಕರ್ನಾಟಕ ಹಾಗೂ ಭಾರತ ದೇಶದಲ್ಲಿಯ ಬುಡಕಟ್ಟು ಜನಾಂಗಗಳ ಕಥನ ಗೀತೆಗಳು, ತಮ್ಮ ಸಂಸ್ಕೃತಿಗಳಲ್ಲಿ ಕಾಣುವ ಪಾಡ್ದನಗಳು, ಕಾವ್ಯಗಳು, ಮಹಿಳಾ ಶಕ್ತಿಯನ್ನು ಪ್ರದರ್ಶಿಸುವ ಹಾಗೂ ಪ್ರದರ್ಶಿಸಿದ ಮಾದರಿಗಳಾಗಿ ಕಂಡು ಬರುತ್ತವೆ. ಮಹಿಳಾ ಜನಪದದಲ್ಲಿ ಅಧ್ಯಯನ ಅತ್ಯಂತ ನಿಗೂಢವಾದದ್ದು, ಮಹಿಳಾ ಬದುಕಿನ ಲೋಕ ಅವಳ ಜೀವನದ ನೋವುಗಳನ್ನು ಅರಿಯಬೇಕಾಗಿದೆ. ಅವುಗಳ ಪ್ರತಿಯೊಂದು ಎಳೆಎಳೆಗಳನ್ನು ಹೊರತಂದು ಹೊಸ ಅನ್ವೇಷಣೆಯಲ್ಲಿ ನೋಡಬೇಕಾದ ತುರ್ತು ಕಾಲವೊಂದು ಬಂದೊದಗಿದೆ.

ಇಂತಹ ಕಾಲಗರ್ಭದಲ್ಲಿ ಹುದುಗಿ ಹೋದ ಮಹಿಳೆಯ ವ್ಯಕ್ತಿತ್ವ ಸಾಧನೆ ಅವಳ ಶಕ್ತಿ ಸಾಮರ್ಥ್ಯಗಳು ಶೋಧಿಸುವಲ್ಲಿ ಒರೆಗಲ್ಲಿಗೆ ಹಚ್ಚುವ ಕೆಲಸ ಯಾವಾಗಲು ನಡೆದುಕೊಂಡು ಬಂದಿದೆ. ಅವುಗಳನ್ನು ತಿಳಿದುಕೊಳ್ಳಬಯಸುವಲ್ಲಿಯೂ ಕೂಡಾ ಅರ್ಥವಂತಿಕೆ ಕೊಡಲಾಗಿದೆ.

ಪುರುಷ ಪ್ರಧಾನ ವ್ಯವಸ್ಥೆ ಹಾಗೂ ಕಲ್ಪನೆಯಲ್ಲಿ ನಲುಗಿ ಹೋದ ಮಹಿಳಾ ವ್ಯವಸ್ಥೆ ಹೇಗೆ ತನ್ನನ್ನು ತಾನು ಅರ್ಥೈಸಿಕೊಂಡಿದ್ದಾಳೆ. ಅದು ಪ್ರಾಚೀನ ಕಾಲದಿಂದ ನಮ್ಮ ಪದ್ಧತಿ-ಆಚರಣೆಗಳ ಕೆಲಸ ಕಾರ್ಯಗಳು ಬದಲಾಗಿವೆ, ಜಾಗತೀಕರಣ ಬಂದಿದೆ.

ಈ ಹೊತ್ತಿನಲ್ಲೂ ಸಹ ನಾವು ಮಹಿಳೆಯನ್ನು ಮಹಿಳೆಯಾಗಿ ನೋಡಿಲ್ಲ, ನೋಡುವುದಿಲ್ಲ. ನೋಡುವುದಂತೂ ದೂರದ ಮಾತಾಗಿದೆ. ಇದರಿಂದ ಮಹಿಳಾ ಹೀನಸ್ಥಿತಿ ನೋಡಿ ಜನಪದ ಸಾಹಿತ್ಯದಲ್ಲಿ ಸಹಿತ ಆಕೆ ತೋರಿದ ಪ್ರತಿಕ್ರಿಯೆ ಗುರುತಿಸಲು ಸಾಧ್ಯವಾಗುವುದು ಅವರ ಕಥೆ, ಗೀತೆ, ಕಾವ್ಯಗಳಲ್ಲಿ ಮಾತ್ರ ಮಹಿಳಾ ನೋವು ನಲಿವು

ಅವುಗಳ ತೀವ್ರ ಸ್ಪಂದನವನ್ನು ಹೇಳುತ್ತಾ ಹೊರಟಿರುವುದಾಗಿದೆ. ಮಹಿಳಾ ಸಂವೇದನೆ ಆಕೆಯ ನೋವು ನಲಿವು ಸಹ ದುಡಿತ-ಮಿತಿಡಗಳ ಅಂತರಂಗದ ಮೂಲಕ ಅಭಿವ್ಯಕ್ತಗೊಂಡ ಮನಮೋಹಕವನ್ನು ಚಿತ್ರಿಸುತ್ತದೆ. ಆಕೆಯು ಪಡೆದುಕೊಂಡ ಹೃದಯ ಶೋಷಣೆ ಕಂಬನಿ, ನೋವುಗಳನ್ನು ಮಿಡಿಯುತ್ತವೆ.

ಈ ವ್ಯವಸ್ಥೆಯಿಂದ ಹೊರಬಂದ ಅಕ್ಷರ ನೋಟದಲ್ಲಿ ಹೊಸತನದ ಅಧ್ಯಯನ ಕಾಣಬೇಕೆಂಬ ಬದುಕು ಮಹಿಳಾ ಜನಪದ ಸಾಹಿತ್ಯದ ಮೂಲಕ ಹೊರಬಂದಿರುವುದು ಇಲ್ಲಿ ಅವಲೋಕಿಸಲಾಗಿದೆ. ಮಹಿಳಾ ಅಧ್ಯಯನದಲ್ಲಿ ಜನಪದ ಸಾಹಿತ್ಯಕ್ಕೆ ಅವರು ಕೊಟ್ಟ ವಿಶೇಷತೆಯ ಕೊಡುಗೆ ಅನನ್ಯ ಆಕಾರವಾದುದ್ದು. ಇಂದು ಜಗತ್ತಿನಾದ್ಯಂತ ಬಹು ಶಿಸ್ತು ಹಾಗೂ ತೌಲನಿಕ ವಿಮರ್ಶಾತ್ಮಕ ಅಧ್ಯಯನಗಳು ಜಾಗತೀಕರಣದಂತೆ, ಪ್ರವಾಹದಂತೆ ಹರಿದು ಬರುತ್ತವೆ. ಸಾಹಿತ್ಯದ ಹಲವು ಪ್ರಕಾರಗಳು ಬಹುಮುಖಿ ನೆಲೆಗಳಿಂದ ಕೂಡಿದ ಅಧ್ಯಯನ ಹೃದಯ ಸ್ಪರ್ಶಿಯಾಗಿವೆ. ಅವುಗಳ ಹಿನ್ನೆಲೆ-ನೆಲೆ-ಬೇರೆಯ ಸಾಹಿತ್ಯ ಜನಪದ ಸಾಹಿತ್ಯದಲ್ಲಿಯೂ ಸಹ ಆತಂಕ ಹಾಗೂ ಬಹಿರಂಗಿಕವಾಗಿಯೂ ತನ್ನ ಮೂಲ ಸ್ಥೈರ್ಯವನ್ನು ಎತ್ತಿ ಹೇಳುತ್ತದೆ.

ಮಹಿಳೆಯನ್ನು ಭೂಮಿಗೆ ಹೋಲಿಸುತ್ತಾರೆ, ಮಹಿಳೆ ಆದಿಶಕ್ತಿ, ಸ್ತ್ರೀಯಿಂದಲೇ ಎಲ್ಲಾ ಸಾಧ್ಯವೆಂದು ಹೇಳುತ್ತೇವೆ. ಮನೆಯೇ ಮೊದಲ ಪಾಥ ಶಾಲೆ ತಾಯಿಯೇ ಮೊದಲ ಗುರು ಈ ರೀತಿಯಾಗಿ ಮಗುವಿನ ಸರ್ವಾಂಗೀಣ ವಿಕಾಸಕ್ಕೆ ಈ ತಾಯಿಯ ಕೊಡುಗೆ ಮಹತ್ವದ್ದಾಗಿದೆ.

ಹೆಣ್ಣು ಮಗಳಾಗಿ, ಸೊಸೆಯಾಗಿ, ಹೆಂಡತಿಯಾಗಿ, ತಾಯಿಯಾಗಿ ವಿವಿಧ ರೀತಿಯ ಸ್ಥಾನಮಾನ ಪಡೆದುಕೊಂಡ ಈ ಹೆಣ್ಣು ಗಂಡಸಿಗಿಂತ ಎರಡು ಪಟ್ಟು ಮುಂದೆ ನಿಲ್ಲಬಲ್ಲಳು. ಜಾನಪದ ಮಹಿಳೆಯು ತನ್ನ ಮಗಳ ಬಗ್ಗೆ ಈ ರೀತಿಯಾಗಿ ಹೇಳುತ್ತಾಳೆ.

‘ ಹೆಣ್ಣಿದ್ದ ಮನೆಗೆ ಕನ್ನಡಿ ಯಾತಕ್ಕೆ
ಹೆಣ್ಣು ಸಣ್ಣವಳು ಒಳಗಿರಲು ನನ್ನ ಮಗಳು
ಕನ್ನಡಿ ಹಾಂಗ ಹೊಳೆಯುವಳು’

ಎಂದೂ ಹೇಳುವುದರ ಮೂಲಕ ಮಹಿಳೆ ತನ್ನ ಕರುಳ-ಬಳ್ಳಿಯನ್ನು ಹೊಗಳಿದ್ದಾಳೆ.

'ಹತ್ತು ಗಂಡು ಹಡೆದಾಗಲೂ ಮತ್ತೆ ಬಂಜೆನ್ನುವರು
ದಟ್ಟಿ ಉಡುವ ದ್ರೌಪದಿ ಹುಟ್ಟಿದರ।
ತಂಗೆಮ್ಮಾ ಬಂಜೆಂಬ ಶಬ್ದ ಅಳಿದಾತು'

ದ್ರೌಪದಿಯಂತಹ ಮಗಳು ಜನಿಸಲಿ ಎಂದು ಮಹಿಳೆ ಇಲ್ಲಿ ತನ್ನ ಆಶಯ ವ್ಯಕ್ತಪಡಿಸಿದ್ದಾಳೆ. ಹತ್ತು ಗಂಡು ಮಕ್ಕಳು ಹಡೆಯುವುದಕ್ಕಿಂತ ಒಬ್ಬ ದ್ರೌಪದಿಯಂತ ಕಿತ್ತೂರ ರಾಣಿ ಚೆನ್ನಮ್ಮನಂತಹ ಮಹಿಳೆ ಹೆತ್ತರೆ ಅವಳು ಒಂದು ಮನೆ, ಸಮಾಜ ದೇಶವನ್ನು ಸುಭದ್ರ ದಾರಿಗೆ ಕೊಂಡೊಯ್ಯುವುದರಲ್ಲಿ ಎರಡು ಮಾತಿಲ್ಲ.

ಸ್ತ್ರೀವಾದಿ ನೆಲೆಯಿಂದ ಕನ್ನಡ ಜಾನಪದವನ್ನು ಅರ್ಥೈಸುವ ಹೊಸ ಪ್ರಯತ್ನವಾಗಿದ್ದು ಇದುವರೆಗೂ ಜಾನಪದದ ಅಧ್ಯಯನಕ್ಕೆ ಅಪರಿಚಿತವಾಗಿದ್ದ ಹೊಸ ಆಯಾಮವನ್ನು ತೆರೆದಿದೆ. ಇನ್ನೊಂದು ದಿಕ್ಕಿನಿಂದ ಇದು ನಮ್ಮ ಜಾನಪದದ ಮಾಹಿತಿಗಳ ಮೂಲಕ ಭಾರತೀಯ ಸ್ತ್ರೀವಾದವನ್ನು ಶೋಧಿಸುವ ಪ್ರಯತ್ನವಾಗಿ ಸ್ತ್ರೀವಾದಿ ಸಿದ್ಧಾಂತಕ್ಕೆ ಹೊಸ ವಿಸ್ತಾರವನ್ನು ಒದಗಿಸಿದೆ.

ಜೊತೆಗೆ ಸ್ತ್ರೀವಾದಿ ಸಿದ್ಧಾಂತವನ್ನು ರೂಪಿಸಿಕೊಳ್ಳುವಲ್ಲಿ ಮೌಖಿಕ ಪರಂಪರೆಯನ್ನು ಹೇಗೆ ದುಡಿಸಿಕೊಳ್ಳಬಹುದು ಎನ್ನುವ ತೋರಿಕೆಯಾಗಿದೆ.

ಸ್ತ್ರೀವಾದಿ ಜಾನಪದ ಅಧ್ಯಯನಕ್ಕೆ ಪ್ರವೇಶವಾದದ್ದು ತೀರ ಈಚೆಗೆ ಕನ್ನಡ ಸ್ತ್ರೀವಾದಿ ಸಾಹಿತ್ಯ ವಿಮರ್ಶೆಗಳು ಪಾಶ್ಚಾತ್ಯ ಸ್ತ್ರೀವಾದಿ ಸಿದ್ಧಾಂತದ ಅನುಕರಣೆಯಲ್ಲಿ ನಡೆದರೆ ಸ್ತ್ರೀವಾದಿ ಜಾನಪದ ಅಧ್ಯಯನ ಕೂಡ ಅದೇ ಜಾಡಿನಲ್ಲಿ ಸಾಗಿದ್ದು ತನ್ನದೇ ಆದ ಹಾದಿಯ ಹೆಜ್ಜೆಗಳನ್ನು ಮೂಡಿಸುವುದು ಅದಕ್ಕೆ ಸಾಧ್ಯವಾಗಿಲ್ಲ. ಇದುವರೆಗಿನ ಸ್ತ್ರೀವಾದಿ ಜಾನಪದ ಬರಹಗಳು ಜಾನಪದದಲ್ಲಿನ ಹೆಣ್ಣಿನ ಚಿತ್ರಣಗಳಾಗಿವೆಯೇ ಹೊರತು ಹೆಣ್ತನದ ಅಸ್ಮಿತೆಯ ಚಿತ್ರವಾಗಿಲ್ಲ.

ಹೆಣ್ಣಿನ ಬುದ್ಧಿ ಮೊಳಕಾಲ ಕೆಳಗೆ
ಗಂಡು ನೋಡಿ ಹೆಣ್ಣು ಕೊಡಬೇಕು
ಗಂಡು ಕೂತು ಕೆಟ್ಟ ಹೆಣ್ಣು ತಿರುಗಿ ಕೆಟ್ಟಳು
ಕಪ್ಪೆ ಸೊಕ್ಕಿದರೆ ಹಳ್ಳದಲ್ಲಿ ನಿಲ್ಲದು ಹೆಣ್ಣು ಸೊಕ್ಕಿದರೆ
ಮನೆಯಲ್ಲಿ ನಿಲ್ಲದು

ಮಜ್ಜಿಗೆಯಲ್ಲಿದ್ದ ಬೆಣ್ಣೆ ಕೆಡುವುದಿಲ್ಲ ಅಂಜಿಕೆಯಿಲ್ಲದ ಹೆಣ್ಣು ಕೆಡುವಳು

ಮೇಲಿನ ನಾಣ್ನುಡಿಗಳನ್ನು ನಾವು ಜನಪದ ಸಾಹಿತ್ಯದಲ್ಲಿ ಅವಲೋಕಿಸಿದಾಗ ಹಿಂದೆ ನಮ್ಮ ಸಮಾಜ ಪುರುಷ ಪ್ರಧಾನವಾದ ಸಮಾಜವಾಗಿತ್ತು. ಆದರೆ ಹಿಂದೆ ಕೆಲವೊಂದು ಯುಗದಲ್ಲಿ ಸ್ತ್ರೀಗೆ ಬಹಳಷ್ಟು ಸ್ಥಾನಮಾನವಿದ್ದರು ಎಂದಿನಿಂದಲೂ ಸ್ತ್ರೀಯೂ ಶೋಷಣೆಗೆ ಒಳಗಾಗಿದ್ದಾಳೆ.

ಮಾನವೀಯ ವಿಷಯ ಕೇಂದ್ರಿತ ಜಾನಪದವು ಹೆಣ್ಣು ಗಂಡಿನ ವಿಶೇಷವಾಗಿ ಅವರ ನಡುವಣ ಸಂಬಂಧವನ್ನು ಕುರಿತು ವಿವೇಚಿಸುತ್ತದೆ. ಉದಾ: ಗಾದೆ, ಒಗಟು, ಬೈಗುಳ, ಸಾಮಾನ್ಯವಾಗಿ ಲಿಂಗ ಮತ್ತು ಲಿಂಗಪ್ರಭೇದದ ಸುತ್ತ ಇದ್ದು ಹೆಣ್ಣು ಗಂಡಿನ ಚಿತ್ರಣವನ್ನು ನೀಡುತ್ತವೆ. ಜಾನಪದ ಕತೆ, ಗೀತೆಗಳು ಹೆಣ್ಣು ಗಂಡಿನ ಸಂಬಂಧಗಳನ್ನು ಹೇಳಲು ದುಡಿಯುತ್ತಿವೆ. ಹೀಗೆ ಜನಪದ ಸಾಹಿತ್ಯ ಜಗತ್ತಿನಲ್ಲಿ ಅಭಿವ್ಯಕ್ತಗೊಂಡ ಸ್ತ್ರೀ ತತ್ವವನ್ನು ಈಗಾಗಲೇ ಬಂದಿರುವ ಜನಪದ ಸಾಹಿತ್ಯ ಸಂಗ್ರಹಗಳು ಎಷ್ಟರ ಮಟ್ಟಿಗೆ ಪ್ರತಿನಿಧಿಸುತ್ತವೆ, ಅವು ಎಷ್ಟು ಪಾರ್ಶಿಕವಾಗಿವೆ ಎನ್ನುವುದನ್ನು ನೋಡಬೇಕಾಗಿದೆ. ಜನಪದ ಕತೆಯು ಅಜ್ಜಿ ಕತೆಯಾಗಿ ಹೆಣ್ಣಿನೊಂದಿಗೆ ಸ್ಥಾಪಿಸಿಕೊಂಡಿರುವುದು ಬಹುತೇಕ ಜಾನಪದ ಕತೆಗಳು ಸ್ತ್ರೀ ಕೇಂದ್ರೀತವಾಗಿದ್ದು, ಅಲ್ಲಿನ ನಾಯಕಿ ಹೆಣ್ಣಾಗಿರುವುದು ತಾರ್ಕಿಕವಾಗಿದೆ.

ಮನುಷ್ಯ ಜಗತ್ತಿನ ಸೃಷ್ಟಿಗೆ ಮಾನವ ಜನಾಂಗಕ್ಕೆ ಕಣ್ಣು ತೆರೆಯುವ ಸೃಷ್ಟಿಗೆ ಪ್ರಕೃತಿಯಂತೆ ಮಹಿಳೆ ಕೆಲಸ ನಿರ್ವಹಿಸಿದ್ದಾಳೆ. ಮಹಿಳೆ ಕುಲವನ್ನು ರಕ್ಷಿಸಿ ಮಹಿಳೆ ಗರ್ಭಧರಿಸುವ ಮೂಲಕ ಬಾಣತಿಯಾಗಿ ಮಕ್ಕಳನ್ನು ಹೆರುವುದು ಸಂತಾನ ಪೋಷಣೆಗೆ ಮಕ್ಕಳ ಪಾಲನೆ ಪೋಷಣೆ ಬೆಳವಣಿಗೆಗೆ ಮೂಲಕಾರಣವಾಗಿಯೂ ಅಂಧಕಾರವಾದ ಬಹುಮುಖಿ ನೆಲೆಗಳಲ್ಲಿ ಜ್ಞಾನದ ಹೊನಲನ್ನು ಬಿತ್ತುವ ಕಾರ್ಯ ಕೈಗೊಳ್ಳಲಾಗಿದೆ. ಹೀಗೆ ಮಹಿಳೆ ತನ್ನನ್ನೂ ತಾನೂ ಸಂಪೂರ್ಣವಾಗಿ ಹುಟ್ಟಿದಾಗಿನಿಂದ ಹಿಡಿದು ಸಾಯುವವರೆಗೂ ನಿರಂತರವಾದ ದೈಹಿಕ, ಮಾನಸಿಕ ದೌರ್ಬಲ್ಯಗಳನ್ನು ಅನುಭವಿಸುತ್ತಲೇ ಬರುತ್ತಾಳೆ. ಮಹಿಳೆ ಜನಪದ ಕತೆಗಳು ಬಹು ಸ್ವಾರಸ್ಯಕರದಿಂದ ಕೂಡಿದೆ. ಅವಳ ಆಲೋಚನೆ ತನ್ನ ಶಕ್ತಿ ಸಾಮರ್ಥ್ಯಗಳನ್ನು ಪ್ರತಿಪಾದಿಸಲು ಮುಂದೆ ಬಂದಿದ್ದಾಳೆ.

ಜಗತ್ತಿನಲ್ಲಿ ಯಾವ ದೇಶಗಳನ್ನು ತೆಗೆದುಕೊಂಡರು ಸಹ ಅಲ್ಲಿನ ಸ್ವಾತಂತ್ರ್ಯ ಹಕ್ಕು ಅಕ್ಷರ ಜ್ಞಾನದಿಂದ ಸಂಪೂರ್ಣವಾಗಿ ಆಕೆಯನ್ನು ವಂಚನೆಗೊಳಿಸಿ ಕತ್ತಲೆಯಲ್ಲಿ ಬದುಕುವಂತಹ ಹೀನವಾದಂತ ಪರಿಸ್ಥಿತಿಯಲ್ಲಿ ಅವಳನ್ನು ಕಾಣುವ ಸ್ಥಿತಿ ದುಃಖಕರವಾಗಿದೆ.

ಜನಪದ ಪ್ರಕಾರಗಳನ್ನು ಲಿಂಗಭೇದ ಹಿನ್ನೆಲೆಯಲ್ಲಿ ಸ್ಥಾಪಿತಗೊಳ್ಳುತ್ತ ಬರಲಾಗಿದೆ. ಸ್ತ್ರೀ ಪುರುಷ ಸ್ಥಾನಮಾನವನ್ನು ಹೇಳುತ್ತವೆ. ಮಹಿಳಾ ಜನಪದ ಪ್ರಕಾರಗಳಾದ ಕತೆ, ಹಾಡು, ಏನಿದ್ದರೂ ಬೀಸುವ ಕಲ್ಲಿನ ಮುಂದೆ, ಕುಟ್ಟುವ ಒಣಕೆ ಮುಂದೆ, ಮದುವೆ ಚಪ್ಪರದಲ್ಲಿ ಕೆಲಸದ ಕಣದಲ್ಲಿ ಪ್ರದರ್ಶನಗೊಳ್ಳುತ್ತವೆ. ಸಮುದಾಯದ ಲಿಂಗವ್ಯವಸ್ಥೆಯಲ್ಲಿನ ಹೆಣ್ಣು ಗಂಡಿನ ರೂಪಕವಾಗಿ ಜನಪದ ಸಾಹಿತ್ಯದಲ್ಲಿ ಬಳಕೆಯಾಗಿವೆ. ಬಲಶಾಲಿಯಾದ ಪ್ರಾಣಿಗಳಾದ ಹುಲಿ, ಆನೆ, ನರಿ ಇತ್ಯಾದಿಗಳು ಗಂಡಿಗೆ ಹೋಲಿಸಿದರೆ ಕಾಗೆ, ಗುಬ್ಬಿ, ಪುರ್ಲೆ ಹಕ್ಕಿ ಹೆಣ್ಣಿಗೆ ರೂಪಕವಾಗಿ ಬಳಸಲಾಗಿದೆ. ಲಿಂಗಭೇದ ಅಧ್ಯನದಲ್ಲಿ ಬೈಗಳುಗಳು ಬಹಳ ಮುಖ್ಯವಾಗಿವೆ. ಗಂಡನ್ನು ಬಯ್ಯುವ ಸಂದರ್ಭದಲ್ಲಿಯೂ ಹೆಣ್ಣಿನ ಮೂಲಕವೇ ವ್ಯಕ್ತಗೊಳ್ಳುತ್ತವೆ.

ನಿನ್ನ ಅಬ್ಬೆ ಹೆಣ್ಣು ಹೆರೆಯಲಿ
ನಿನ್ನ ಹೆಂಡತಿ ವಾಲಿ ಕಳೆಯ
ನಿನ್ನ ಹೆಂಡತಿ ರಂಡೆಯಾಗಲಿ

ಇತ್ಯಾದಿಗಳು ನಿರಪರಾಧಿ ಹೆಣ್ಣಿನ ನಿಕೃಷ್ಠತೆಯನ್ನು ತೆರೆದಿಡುತ್ತವೆ. ಮಹಿಳಾ ಪರವಾದ ಮಹಿಳಾ ಜಗತ್ತನ್ನು ಬಿಟ್ಟು ಮನಸ್ಸಿನಿಂದ ತೆರೆದಿಡಬೇಕಾದ ಅನಿವಾರ್ಯತೆ ಇದೆ. ಈ ಕಾರಣದಿಂದಾಗಿಯೇ ಜಗತ್ತಿನ ಎಲ್ಲಾ ಸ್ತ್ರೀವಾದಿ ಚಿಂತಕರು ಮಹಿಳಾ ಚಿಂತನೆ, ಅಧ್ಯಯನ ಹಾಗೂ ವಿಮೋಚನಾ ಚಳುವಳಿ ನಡೆದುಕೊಂಡು ಬರಲು ಸಾಧ್ಯವಾಗಿದೆ.

ಕಾಲಗರ್ಭದಲ್ಲಿ ಹೊತ್ತು ಹೋದ ಮಹಿಳೆ ಇಂದು ಅವಕಾಶ ನೀಡುವುದರ ಮೂಲಕ ಆಕೆಯ ಪ್ರತಿಭೆ-ಸಾಮರ್ಥ್ಯ ಹಾಗೂ ಜೀವಪರವಾದ ಸಂಸ್ಕೃತಿಯ ಮನಸ್ಸನ್ನು ಹೊರಹಾಕಬೇಕಾಗಿದೆ. ಮನುಷ್ಯನ ಜೀವಪರ ಸಂಸ್ಕೃತಿ ಒಳಗೊಂಡ ಮುಖ್ಯ ಅಧ್ಯಯನ, ಮಹಿಳಾ ಚಿಂತನೆ, ಮಹಿಳಾ ಸಂಸ್ಕೃತಿಗಳ ಮಾನವ ಜನಾಂಗದ ಇತಿಹಾಸದ ರಚನೆಗೆ, ಚಿಂತನೆಗೆ ಪೂರಕವಾದ ಆಕಾರ ಮಾಹಿತಿ ಸಾಮಾಗ್ರಿ ಒದಗಿಸುತ್ತದೆ. ಸಮಾನವಾಗಿಸುತ್ತದೆ. ಸಿರಿ-ಮಹಿಳೆ-ಪುರುಷರೆಂಬ ಸಮಾನತೆಯ ವಾದ ಸಮಾನತೆಯ ದ್ಯೋತಕವೆಂಬುದನ್ನು ಎತ್ತಿ ಹೇಳಬೇಕಾಗಿದೆ.

ಆ ನಿಟ್ಟಿನಲ್ಲಿ ಅವರ ಪ್ರಯತ್ನ ಸ್ತುತ್ಯಾರ್ಹವಾದದ್ದು. ಜನಪದ ಸಾಹಿತ್ಯದಲ್ಲಿ ಮಹಿಳಾ ಪ್ರತಿಭಟನೆ ಆ ದಿಕ್ಕಿನೆಡೆಯಲ್ಲಿ ಸಾಗುವ ಅಧ್ಯಯನ ಇದೇ ಮಹಿಳಾ ಲೋಕ ಹಾಗೂ ಸಾಂಸ್ಕೃತಿಕ ಬದುಕಿಗೆ ತನ್ನ ಕೊಡುಗೆ ನೀಡಿದೆ. ಈ ಒಂದು ಆಂಶಿಕ ನಿಬಂಧ ಮುಂದಿನ ಅಧ್ಯಯನಕ್ಕೆ ದಿಕ್ಸೂಚಿ ಆಗಲಿದೆ ಎಂಬ ಪ್ರಾಮಾಣಿಕ ನಂಬಿಕೆಯಿದೆ.

# ಗ್ರಂಥಋಣ

| ಕ್ರ.ಸಂ | ಲೇಖಕ/ಸಂಪಾದಕ | ಕೃತಿಗಳು | ಪ್ರಕಾಶನ | ವರ್ಷ |
|---|---|---|---|---|
| ೧. | ಅಂಬಳಕೆ ಹಿರಿಯಣ್ಣ | ಜಾನಪದ ಕೆಲವು ಅಧ್ಯಯನಗಳು | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು | ೧೯೯೪ |
| ೨. | ಅಂಬಳಕೆ ಹಿರಿಯಣ್ಣ | ಕೆರೆಪೂಜೆ ಲಾವಣಿಗಳ | ಕನ್ನಡ ಅಧ್ಯಯನ ಸಂಸ್ಥೆ ಮೈಸೂರು | ೧೯೭೬ |
| ೩. | ಅಮೃತ ಸೋಮೇಶ್ವರ | ತುಳುಪಾಡ್ದನದ ಕಥೆಗಳು | ಸಾಹಿತ್ಯಾಂಜಲಿ ಗ್ರಂಥಮಾಲೆ ಕೋಟೆಕಾರು | ೧೯೭೮ |
| ೪. | ಅಮೃತ ಸೋಮೇಶ್ವರ | ತುಳು ಬದುಕು | ಪ್ರಕೃತಿ ಪ್ರಕಾಶನ ಕೋಟೆಕಾರು | ೧೯೮೪ |
| ೫. | ಕಾಳೇಗೌಡ ನಾಗವಾರ | ಬೀದಿ ಮಕ್ಕಳು ಬೆಳೆದೊ | ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು | ೧೯೭೭ |
| ೬. | ಕಾಳೇಗೌಡ ನಾಗವಾರ | ಜಾನಪದ ಸಾಹಿತ್ಯ | ಯುಗಾದಿ ಪ್ರಕಾಶನ ಬೆಂಗಳೂರು | ೧೯೯೬ |
| ೭. | ಕೃಷ್ಣ ಶರ್ಮ ಬೆಟಗೇರಿ | ಕನ್ನಡ ಜಾನಪದ ಸಾಹಿತ್ಯ | ಕನ್ನಡ ಅಧ್ಯಯನ ಪೀಠ ಧಾರವಾಡ | |
| ೮. | ಗಣಪತಿರಾವ್ ಐಗಳ್ | ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ | ಶಾರದಾಪ್ರೆಸ್ ಮಂಗಳೂರು | ೧೯೧೭ |
| ೯. | ಗಾಯತ್ರೀ ನಾವಡ | ಮೂಕಜ್ಜಿ ಬದುಕು ಸಾಹಿತ್ಯ | ಪ್ರಾದೇಶಿಕ ವ್ಯಾಸಂಗ ಕುಂದಾಪೂರ | ೧೯೮೭ |
| ೧೦. | ಗಾಯತ್ರೀ ನಾವಡ | ಮಹಿಳಾ ಜಾನಪದ ಕತೆಗಳು | ಎರಡು ಸಂಪುಟಗಳು | ೧೯೯೭ |
| ೧೧. | ಗುರುಮೂರ್ತಿ ಕೆ.ಜಿ | ಜನಪದ ಸಮಾಜ ಮತ್ತು ಸಂಸ್ಕೃತಿ | ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ | ೧೯೭೯ |
| ೧೨. | ಎಂ.ಚಿದಾನಂದಮೂರ್ತಿ | ಗ್ರಾಮೀಣ | ಭಾಷ್ಕೋ ಪ್ರಕಾಶನ ೮೮, ಮೈಸೂರ ರಸ್ತೆ ಬೆಂಗಳೂರು | ೧೯೭೭ |
| ೧೩. | ಕೆ. ಚಿನ್ನಪ್ಪಗೌಡ | ಭೂತಾರಾಧನೆ ಜಾನಪದಿಯ ಅಧ್ಯಯನ | ಮದಿಪು ಪ್ರಕಾಶನ ಮಂಗಳೂರು | ೧೯೯೦ |
| ೧೪. | ಜವರೇಗೌಡ | ಜಾನಪದ ಅಧ್ಯಯನ | ಡಿ.ವಿ.ಕೆ ಮೂರ್ತಿ ಮೈಸೂರು | ೧೯೭೬ |
| ೧೫. | ತಪಸ್ವೀಕುಮಾರ ನಂ | ಕನ್ನಡ ಒಗಟುಗಳ ಸಮೀಕ್ಷೆ | ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ ಮೈಸೂರು | ೧೯೭೯ |
| ೧೬. | ದೇವೇಂದ್ರಕುಮಾರ ಹಕಾರಿ | ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಖಾಂತರ ನಿರೂಪಣೆ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು | ೧೯೮೫ |

| | | | | |
|---|---|---|---|---|
| ೧೭. | ಹಾ.ಮಾ.ನಾಯಕ | ಜಾನಪದ ಸ್ವರೂಪ | ತ.ವೆಂ.ಸ್ಮಾರಕ ಗ್ರಂಥಮಾಲೆ ಮೈಸೂರು | ೧೯೭೧ |
| ೧೮. | ಮಹೇಶ್ವರಯ್ಯಾ ಎಚ್.ಎಮ್. (ಸಂ) ಮತ್ತು ಮುರಿಗೆಪ್ಪ | ಜಾನಪದ ಹೊಸ ದೃಷ್ಟಿ | ಸಹಿತಾ ಪ್ರಕಶನ, ಕಲ್ಯಾಣನಗರ ಧಾರವಾಡ | ೧೯೯೪ |
| ೧೯. | ಲಕ್ಕಪ್ಪಗೌಡ (ಸಂ) ಬಸವರಾಜ ನೆಲ್ಲಿಸರ | ಮಲ್ಲಿಗೆ ಮೊಗ್ಗು ಸುರಿದಾವೆ | ಚಿಕ್ಕಮಗಳೂರು ಜಿಲ್ಲೆ ಜಾನಪದ ಸಮ್ಮೇಳನ ಸ್ಮರಣ ಸಂಪುಟ ತರೀಕೆರಿ | ೧೯೯೩ |
| ೨೦. | ವಾಮಾನ ನಂದಾರಾವ | ಜಾನಪದ ಸುತ್ತಾಮುತ್ತಾ | ಪ್ರಜಾಬಂಧು ಪ್ರಕಾಶನ ಮಂಗಳೂರು | ೧೯೯೨ |
| ೨೧. | ವಾದಿರಾಜಭಟ್ಟ ಕನರಾಡಿ | ಪಾಡ್ದನಗಳು | ಯುಗಪುರುಷ ಪ್ರಕಟಣಾಲಯ ಕಿನ್ನಿಗೋಳಿ | ೧೯೭೪ |
| ೨೨. | ವಿವೇಕ ರೈ ಬಿ.ಎ | ತುಳು ಗಾದೆಗಳು | ಪಲಚಂವಿ ಪ್ರಕಾಶನ ಮಂಗಳೂರು | ೧೯೭೧ |
| ೨೩. | ವಿವೇಕ ರೈ. ಬಿ.ಎ | ತುಳು ಜನಪದ ಸಾಹಿತ್ಯ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು | ೧೯೮೫ |
| ೨೪. | ವಿವೇಕ ರೈ. ಬಿ.ಎ | ತುಳುವ ಅಧ್ಯಯನ | ತುಳುವ ಪ್ರಕಾಶನ ಮಂಗಳೂರು | ೧೯೮೦ |
| ೨೫. | ವೀರಣ್ಣ ದಂಡೆ | ಜನಪದ ಕಥೆಯ ವಸ್ತು ಮತ್ತು ತಂತ್ರ | ಬಸವ ಪ್ರಕಾಶನ ಕಲ್ಬುರ್ಗಿ | ೧೯೮೧ |
| ೨೬. | ವೀರಣ್ಣ ದಂಡೆ | ಕನ್ನಡ ಜಾನಪದ ಪ್ರಜ್ಞೆ | ಕವಿಮಾರ್ಗ ಪ್ರಕಾಶನ ಗುಲಬರ್ಗಾ | ೧೯೯೩ |
| ೨೭. | ಸತ್ಯನಾಥ್.ಟಿ.ಎಸ್ | ಜಾನಪದ ಕೆಲವು ಮುಖಗಳು | ಶಾರದಾ ಪ್ರಕಾಶನ ಗಾಂಧಿನಗರ, ಬೆಂಗಳೂರು | ೧೯೯೩ |
| ೨೮. | ಸುಶೀಲ ಉಪಾಧ್ಯಾಯ | ಜನಪದ ಆರಾಧನೆ ಮತ್ತು ರಂಗಕಲೆ | ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ ಉಡುಪಿ | ೧೯೮೨ |
| ೨೯. | ಹಂಪ ನಾಗರಾಜಯ್ಯ (ಸಂ) | ಜಾನಪದ ಅಧ್ಯಯನ ವಿಚಾರ ಸಂಕಿರಣ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು | ೧೯೮೨ |
| ೩೦. | ಕೆ.ಕೇಶವ ಶರ್ಮಾ | ಕ್ರಿಯೆ-ಪ್ರತಿಕ್ರಿಯೆ | ಅನ್ವೇಷಣೆ ಪ್ರಕಾಶನ, ಬೆಂಗಳೂರು | ೧೯೯೨ |
| ೩೧. | ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ (ಸಂ) | ಸ್ತ್ರೀವಾದಿ ಸಾಹಿತ್ಯ ವಿಮರ್ಶೆ | ಕ್ರೈಸ್ಟ್ ಕಾಲೇಜು, ಕನ್ನಡ ಸಂಘ ಬೆಂಗಳೂರು | ೧೯೯೪ |
| ೩೨. | ಬರಗೂರು ರಾಮಚಂದ್ರಪ್ಪಾ (ಸಂ) | ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆ | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು | ೧೯೯೩ |
| ೩೩. | ಬಸವರಾಜ ಸಬರದ | ಹೊಸದಿಕ್ಕು | ಪಲ್ಲವಿ ಪ್ರಕಾಶನ ಗುಲಬರ್ಗಾ | ೧೯೯೦ |
| ೩೪. | ಮನು ಚಕ್ರವರ್ತಿ (ಸಂ) | ಭಾರತೀಯ ಸ್ತ್ರೀವಾದ ಅಕ್ಷರ ಚಿಂತನೆ ಮಾಲೆ | ಪ್ರಕಾಶನ ಹೆಗ್ಗೋಡು ಸಾಗರ | |

| | | | | |
|---|---|---|---|---|
| ೩೫. | ರಹಮತ್ ತರಿಕೆರೆ | ಮರದೊಳಗಣ ಕಿಚ್ಚು | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ಕಮಲಾಪೂರ | ೧೯೯೬ |
| ೩೬. | ಜಿ.ಎಸ್. ಶಿವರುದ್ರಪ್ಪ | ಕನ್ನಡ ಸಾಹಿತ್ಯ ಸಂದರ್ಭ | ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು | ೧೯೯೩ |
| ೩೭. | ಸುಮಿತ್ರಾಬಾಯಿ ಬಿ.ಎನ್. ಮತ್ತು ಎನ್. ಗಾಯಿತ್ರಿ | ಸ್ತ್ರೀವಾದಿ ಪ್ರವೇಶಿಕೆ | ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು | ೧೯೯೫ |
| ೩೮. | ಡಾ॥ ಗಾಯತ್ರಿ ನಾವಡ | ಭಾರತೀಯ ಸ್ತ್ರೀವಾದ ಒಂದು ಸಂಕಥನ | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ | ೨೦೦೦ |
| ೩೯. | ಡಾ॥ ಗಾಯತ್ರಿ ನಾವಡ | ಮಹಿಳಾ ಸಂಕಥನ | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ | ೨೦೦೨ |
| ೪೦. | ಡಾ॥ ಸಿ. ವೀರಣ್ಣಾ | ಕನ್ನಡ ಕಾವ್ಯ ಕಂಡ ಹೆಣ್ಣು | ಶಕ್ತಿಮುದ್ರಣ ಮತ್ತು ಪ್ರಕಾಶನ ಬೆಂಗಳೂರು | ೧೯೯೫ |
| ೪೧. | ಡಾ॥ ಶಾಂತಾ ಇಮ್ರಾಪೂರ | ಮಹಿಳಾ ಸಾಹಿತ್ಯ ಸಂಸ್ಕೃತಿ | ಚೇತನಾ ಪ್ರಕಾಶನ ಧಾರವಾಡ | ೨೦೦೨ |
| ೪೨. | ಶೈಲಜಾ ಹಿರೇಮಠ ಅಪ್ರಕಟಿತ | ಜನಪದ ಸಾಹಿತ್ಯ ಮಹಿಳಾ ಸಂಸ್ಕೃತಿ | | ೧೯೯೫ |
| ೪೩. | ಡಾ॥ ಎಂ.ಎಂ.ಕಲ್ಬುರ್ಗಿ | ಮಾರ್ಗ–೨ | | ೧೯೯೨ |
| ೪೪. | ಡಾ॥ ಬಸವರಾಜ ಸಬರದ | ಬಂಡಾಯ ಕಾವ್ಯ ಮತ್ತು ಜಾನಪದ | ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು | ೧೯೯೭ |
| ೪೫. | ಡಾ॥ ಆರ್. ಸುನಂದಮ್ಮಾ | ಜನಪದ ಸಾಹಿತ್ಯ ಮಹಿಳಾ ಜಗತ್ತು | ಪ್ರಸಾರಾಂಗ ಅಧ್ಯಯನ ಕೇಂದ್ರ ಬೆಂಗಳೂರು | ೧೯೯೭ |
| ೪೬. | ಡಾ॥ ಸೋಮಣ್ಣಾ | ಕೊಂತಿ ಪೂಜೆ | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ | ೨೦೦೦ |
| ೪೭. | ಡಾ॥ ಬಸವರಾಜ ಸಬರದ | ಬಂಡಾಯ ಜಾನಪದ | ಕನ್ನಡ ವಿಶ್ವವಿದ್ಯಾಲಯ ಹಂಪಿ | ೨೦೦೬ |
| ೪೮. | ಡಾ॥ ಎಲ್.ಎಚ್. ನಾರಾಯಣರಾವ (ಸಂ) | ಜಾನಪದ ಮತ್ತು ಗಿರಿಜನ ಕುರಿತು | | ೧೯೯೦ |
| ೪೯. | ಡಾ॥ ಬಿ.ಎನ್. ಸುಮಿತ್ರಾಬಾಯಿ | ಸ್ತ್ರೀವಾದಿ | ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರ | ೧೯೯೯ |

